ಈ ಸಂಚಿಕೆಯ ಪುರವಣಿ.

ಸದ್ಬೋಧ ಚಂದ್ರಿಕೆಯ

೧೮ನೇ ವರ್ಷದ

ಕಾರ್ತಿಕೆಯ ಪುಸ್ತಕವು.

# ಈಶಪ್ರಸಾದ.

(ಪೌರಾಣಿಕ ಕಾದಂಬರಿ.)



ಲೇಖಕ—ಆರ್. ಟಿ. ಕರ್ಪೂರ,

ಸಬ್ ಎಡಿಟರ, ಸ. ಚ.,

ಆನಂದವನ.

ಪ್ರಕಾಶಕ—ಯ. ಗು. ಕುಲಕರ್ಣಿ,

ಎಡಿಟರ, ಸ. ಚ., ಆನಂದವನ

1925

ಬೆಲೆ ೪ ಆಣೆ.

# ಈಶಪ್ರಸಾದ.

(ಪೌರಾಣಿಕ ಕಾದಂಬರಿ.)

## [೧]



ಪಾಂಚಾಲ ಭೂಪತಿಯ ರಾಜಧಾನಿಯು; ಎಲ್ಲೆಲ್ಲಿ ನೋಡಿದರೂ ಅಪಾರ ವೈಭವವು ದೃಷ್ಟಿಗೆ ಬೀಳುತ್ತಲಿದೆ. ಪಟ್ಟಣಿಗರ ಸುಖಶಾಂತಿಗಳಿಗೆ ಕೊರತೆಯಿಲ್ಲ. ಚತುರ್ವರ್ಣದವರೂ ತಮ್ಮ ತಮ್ಮ ಅಧಿಕಾರಾನುರೂಪವಾಗಿ ವರ್ತಿಸಿ ರಾಜನ ಕ್ಷೇಮಚಿಂತನೆಯನ್ನು ಮಾಡುತ್ತಿರುವರು. ರಾಜನಾದರೂ ಪ್ರಜಾವತ್ಸಲನಾಗಿ ತಂದೆಯು ಮಕ್ಕಳನ್ನು ಕಾಪಾಡುವಂತೆ ಪ್ರಜೆಗಳನ್ನು ಪಾಲಿಸುತ್ತಿದ್ದನು. ಇಂಥ ರಾಜನ ವಾತ್ಸಲ್ಯಕ್ಕೊಳಗಾದ ಪ್ರಜೆಗಳು ಸ್ವತಂತ್ರತೆಯನ್ನೇಕೆ ಬಯಸುವರು? 'ಪ್ರಜಾಸತ್ತಾತ್ಮಕ ಪದ್ಧತಿಯನ್ನೇಕೆ ಇಚ್ಛಿಸುವರು? ಎಲ್ಲಿ ಸ್ವಾರ್ಥವು ಹೆಚ್ಚುವದೋ, ಎಲ್ಲಿ ರಾಜನು ಪ್ರಜೆಗಳ ಹಿತವನ್ನು ಲೆಕ್ಕಿಸದೆ ತನ್ನ ಬೊಕ್ಕಸವನ್ನೇ ಸೊಕ್ಕಿಸುವ ಹವ್ಯಾಸಕ್ಕೆ ಬೀಳುವನೋ ಅಲ್ಲಿ ಮಾತ್ರ ಇಲ್ಲದ ಗೊಂದಲಗಳು ಏಳುವವು. ಇಂಥ ಗೊಂದಲಗಳ ಗಂಧವಿಲ್ಲದ ಪ್ರಜಾವತ್ಸಲ ರಾಜನ ಪ್ರಭಾವದಿಂದಲೇ "ನಾವಿಷ್ಣುಃ ಪೃಥ್ವೀಪತಿಃ" ಎಂಬ ಸಿದ್ಧಾಂತವನ್ನು ಪ್ರಸ್ಥಾಪಿಸುವ ಸಾಹಸವನ್ನು ಸ್ಮೃತಿಕಾರರು ಮಾಡಿದ್ದು! ಆದರೆ ಆ ಸಿದ್ಧಾಂತವು ಕಲಿಯುಗಕ್ಕೆ ಸಂಬಂಧವಿಲ್ಲೆಂಬಂತೆ ತೋರುತ್ತದೆ ಇರಲಿ.

ಪ್ರಶಸ್ತವಾದ ರಾಜಮಂದಿರದಲ್ಲಿ ಇಂದು ದ್ರುಪದರಾಜನು ಒಂದು ಸಭೆಯನ್ನು ಕೂಡಿಸಿದ್ದನು. ಪಾಂಚಾಲ ದೇಶದೊಳಗಿನ ಪ್ರಮುಖರು, ಪ್ರತಿಷ್ಠಿತರು ಸಭೆಯನ್ನಲಂಕರಿಸಿದ್ದರು. ಒಳ್ಳೇ ರೀತಿಯು ಆ ದರ್ಬಾರವು ಸಂಘಟಿತವಾಗಿತ್ತು. ದ್ರುಪದರಾಜನು ರಾಜಚಿನ್ಹಗಳಿಂದ ಯುಕ್ತನಾಗಿ ಉಚ್ಚ ಸಿಂಹಾಸನದ ಮೇಲೆ ವಿರಾಜಮಾನನಾಗಿದ್ದನು. ರಾಜಮಂತ್ರ ಪ್ರವೀಣರಾದ ಮಂತ್ರಿಗಳು ಆತನ ಎಡಬಲ ಪಾರ್ಶ್ವಗಳಲ್ಲಿ ಸಾಲುಗೊಂಡು ಕುಳಿತಿದ್ದರು. ವಸಂತೋತ್ಸವದ ದಿವಸವಾದ್ದರಿಂದ ದರ್ಬಾರದ ಮುಂದಿರುವ ಪುಷ್ಪವಾಟಿಕೆಯು ಪ್ರಫುಲ್ಲಿತವಾಗಿತ್ತು. ಅದರ ಸುಗಂಧವು ಸಭಿಕರ ಉಲ್ಹಾಸವನ್ನು ಹೆಚ್ಚಿಸುತ್ತಿತ್ತು.

ಇಂತು ಸಭೆಯು ನೆರೆದಿರಲು ರಾಜನಾದ ದ್ರುಪದನು ಇನ್ನು ಏನೇನೋ ಹೇಳತಕ್ಕವನಿದ್ದನು. ಅಷ್ಟರಲ್ಲಿ ಓರ್ವ ಪ್ರತಿಹಾರಿಯು ಬಂದು ಎರಡೂ ಮೊಣಕಾಲೂರಿ ಮುಜರೆ ಮಾಡಿ ದಾಶಾರ್ಣಾಧಿಪತಿಯು ಕಳಿಸಿದ ದೂತನು ಯಾವದೋ ಒಂದು ಮಹತ್ವದ ಕೆಲಸಕ್ಕಾಗಿ ಬಂದಿದ್ದು, ಸನ್ನಿಧಿಯನ್ನು ಕಾಣಲಿಚ್ಛಿಸುತ್ತಿರುವನು ಎಂದುಸುರಿದನು. ಪ್ರತಿಹಾರಿಯ ಮಾತು ಕೇಳಿ ದ್ರುಪದನು ಅವನನ್ನು ಒಳಗೆ ಬಿಡಲು ಆಜ್ಞಾಪಿಸಿದನು. ದಾಶಾರ್ಣಾಧಿಪನ ದೂತನು ಒಳಗೆ ಬಂದು ಬೀಕದಿಂದ ಮುಜುರೆ ಮಾಡಿ ಕಂಕುಳಲ್ಲಿಟ್ಟಿದ್ದ ಜರತಾರೀ ರೇಷ್ಮೆಯ ಚೀಲವನ್ನು ಮುಂದಿಟ್ಟು ದೂರ ಸರಿದನು. ಚೀಲವು ರಾಜಮುದ್ರೆಯಿಂದ ಪ್ರತಿಬಂಧಿಸಲ್ಪಟ್ಟಿತ್ತು. ದ್ರುಪದನು ಅದನ್ನು ಕೈಯಲ್ಲಿ ತಕ್ಕೊಂಡನು. ದಾಶಾರ್ಣಾಧಿಪತಿಯು ತನಗೆ ಬೀಗನಾಗಿದ್ದು, ಇಷ್ಟು ಆತುರತೆಯಿಂದ ಏನು ಬರೆದು ಕಳುಹಿಸಿರುವನೋ ನೋಡಬೇಕೆಂಬ ಕುತೂಹಲವು ಅವನಲ್ಲುಂಟಾಯಿತು. ಆದ್ದರಿಂದ ಅವನು ತಡಮಾಡದೆ ಚೀಲದ ಮೇಲಿರುವ ರಾಜಮುದ್ರೆಯನ್ನು ಭಂಗಪಡಿಸಿ

ಒಳಗಿನ ಪತ್ರವನ್ನು ಕೈಯಲ್ಲಿ ತಕ್ಕೊಂಡು ಓದಿಕೊಳ್ಳಲಾರಂಭಿಸಿದನು. ಪತ್ರವನ್ನು ಓದಿ ಓದಿದಂತೆ ಅವನ ಮುಖಲಕ್ಷಣವು ಬದಲಿಸಹತ್ತಿತು. ಬರಬರುತ್ತ ಅವನ ಮುಖವು ಕಪ್ಪಿಟ್ಟಿತು. ಆ ಕಪ್ಪುಛಾಯೆಯಲ್ಲಿ ಕ್ರೋಧ ಸಂತಾಪಗಳು ವ್ಯಕ್ತವಾಗ ತೊಡಗಿದವು. ಆತನ ಈ ಮುಖಲಕ್ಷಣದಿಂದ ಏನೋ ಅಶುಭ ಹಾಗು ಅಪಮಾನಕರ ವಾರ್ತೆಯಿರುವದೆಂದು ಸಭಿಕರು ತರ್ಕಿಸಿದರು! ಕೆಲ ಹೊತ್ತಿನ ಮೇಲೆ ಪತ್ರವು ಮುಗಿಯಲು ಮನಸ್ಸು ವ್ಯಗ್ರವಾದ್ದರಿಂದ ಸಭೆಯ ಕೆಲಸವನ್ನೇನೂ ನೆರವೇರಿಸದೆ ದ್ರುಪದನು ಸಭೆಯಿಂದೆದ್ದು ಹೋದನು. ಮಹಾರಾಜನ ಚಿಂತೆಗೆ ಕಾರಣವಾದ ಸಂಗತಿಯು ಆ ಪತ್ರದಲ್ಲಿ ಏನಿರಬಹುದು? ಎಂದು ಯೋಚಿಸುತ್ತ ಮಂತ್ರಿಗಳೂ ಇನ್ನುಳಿದ ಸಭಿಕರೂ ತಮ್ಮ ತಮ್ಮ ಗೃಹಗಳಿಗೆ ತೆರಳಿದರು.

---

## [೨]

ರಮಣೀಯವಾದ ಅಂತಃಪುರವು; ಗಗನಾಂಗಣವನ್ನು ಬೆಳಗುವ ನಕ್ಷತ್ರಗಳಂತಿರುವ ಚಂದಿರವದನೆಯರು ಆ ಅಂತಃಪುರದ ರಮಣೀಯತೆಯ ಹೆಚ್ಚಳಕ್ಕೆ ಕಾರಣರಾಗಿ ಅಲ್ಲಲ್ಲಿ ಸಂಚರಿಸುತ್ತಿದ್ದರು. ದ್ರುಪದರಾಜನು ರತ್ನಖಚಿತವಾದ ಒಂದು ಮಂಚದ ಮೇಲೆ ಕುಳಿತುಕೊಂಡಿದ್ದನು; ಅವನ ಬಳಿಯಲ್ಲಿ ಒಬ್ಬ ಪ್ರೌಢಸ್ತ್ರೀಯು ಕುಳಿತುಕೊಂಡಿದ್ದಳು. ಅವರಿಬ್ಬರ ಮುಖಗಳು ಅಪಾರವಾದಚಿಂತೆಯಿಂದ ವ್ಯಾಪ್ತವಾಗಿದ್ದವು. ಎಷ್ಟೋ ಹೊತ್ತಿನ ವರೆಗೆ ಅವರಿಬ್ಬರಲ್ಲಿ ಮೌನವೃತ್ತಿಯು ನೆಲೆಗೊಂಡಿತ್ತು. ಬಳಿಕ ದ್ರುಪದರಾಜನು ತಾನೇ ಆ ಮೌನವನ್ನು ಭಂಗಪಡಿಸಿ—

"ಪ್ರಿಯೇ, ಏನಾಯಿತಲ್ಲ! ಇಷ್ಟು ದಿವಸ ಗೌಪ್ಯವಾಗಿದ್ದ ಸುದ್ದಿಯು ಈಗ ಬೈಲಿಗೆ ಬಿದ್ದುಹೋಯಿತು. ಇದೊಂದು ನಮಗೆ ದೊಡ್ಡ ಗಂಡಾಂತರವೇ ಪ್ರಾಪ್ತವಾದಂತಾಯಿತು. ನಮ್ಮ ಶಿಖಂಡಿಗೆ ಲಗ್ನಮಾಡಿದ್ದು ನನ್ನದು ಶುದ್ಧ ಮೂರ್ಖತನವಾಯಿತು. ಹಾಯ್‌ ಹಾಯ್! ಮುಂದೆ ಹ್ಯಾಗೆ ಮಾಡಬೇಕು? ಕಾಂಚನವರ್ಮನು ನನ್ನನ್ನು ಬಹಳವಾಗಿ ಜರೆದು ಪತ್ರ ಬರೆದಿರುವನು. ನಿಜವಾದ ಸಂಗತಿಯನ್ನು ಅವನಿಗೆ ಹೇಳಬೇಕಂತೆ; ಇಲ್ಲವೆ ಅವನೊಡನೆ ಯುದ್ಧಕ್ಕೆ ನಿಲ್ಲಬೇಕಂತೆ; ಯುದ್ಧಕ್ಕೆ ನಿಲ್ಲಲು ನನಗೆ ಅಸಮಾಧಾನವಿಲ್ಲ. ಯುದ್ಧಮುಖದಿಂದ ಆ ಕಾಂಚನವರ್ಮನ ಸೊಕ್ಕನ್ನು ಇಳಿಸಬಲ್ಲೆನು. ಆದರೆ ಯುದ್ಧದ ಕಾರಣವು ಜನರಿಗೆ-ಪರರಾಜರಿಗೆ ತಿಳಿದರೆ ನನ್ನ ಅವಮಾನವು ಹಲವು ಬಗೆಗಳಿಂದಾಗುವದು. ಇಂಥ ಸಾಹಸವನ್ನು ನಾನೇಕೆ ಮಾಡಿದೆನೋ ಹುಡುಗಿ!" ಎಂದು ನುಡಿದು ದಾರುಣವಾದ ದುಃಖದಿಂದ ಕ್ಷಣ ಹೊತ್ತು ಮೂರ್ಛೆ ಹೊಂದಿದನು.

ಬಳಿಯಲ್ಲಿ ಕುಳಿತ ದ್ರುಪದ ಪತ್ನಿಯು ಗಾಬರಿಯಾಗಿ ಲಗಬಗೆಯಿಂದ ಶೈತ್ಯೋಪಚಾರಗಳನ್ನು ಮಾಡಿದಳು. ಕೆಲಹೊತ್ತಿನ ಮೇಲೆ ದ್ರುಪದನು ಶುದ್ಧಿಯ ಮೇಲೆ ಬಂದನು. ಗಂಡನಿಗುಂಟಾದ ದುರವಸ್ಥೆಯನ್ನು ತಿಳಿದು ಆ ದ್ರುಪದಪತ್ನಿಯು ಬಹಳವಾಗಿ ಮಿಡುಕಿ ನುಡಿದಳೇನಂದರೆ—

"ಮಹಾರಾಜ, ತಾವು ಇಷ್ಟೊಂದು ದುಃಖಪಡುವದಕ್ಕಿಂತ ಆ ಕೈಲಾಸಪತಿಗೆ ಮೊರೆಯಿಡುವದು ಯುಕ್ತವಾಗಿ ತೋರುತ್ತದೆ. ಯಾಕಂದರೆ ನೀವಾಗಿಯೇ ಬುದ್ಧಿಪೂರ್ವಕವಾಗಿ ಇಂಥ ಸಾಹಸ ಮಾಡಲೆತ್ನಿಸಿಲ್ಲ. ಆ ಶೂಲಪಾಣಿಯ ಪ್ರಸಾದವೇ ನಿಮ್ಮನ್ನು ಈ ರೀತಿ ದುಃಖಕ್ಕೀಡುಮಾಡಿದೆ."

"ಪ್ರಿಯೇ, ಹೀಗೆ ನುಡಿಯಬೇಡ; ದೇವಾಧಿದೇವನಾದ ಶಂಕರನ ಪ್ರಸಾದಕ್ಕೆ ದೂಷಣೆಕೊಡಬೇಡ; ಆತನ ಪ್ರಸಾದವು ಕಾಲತ್ರಯದಲ್ಲೂ ಸುಳ್ಳಾಗದು. ಆದರೆ ಸದ್ಯಕ್ಕೆ ನಮ್ಮ ದುರ್ದೈವವು ಮಾತ್ರ ನಮ್ಮನ್ನು ದುಃಖಭಾಗಿಗಳನ್ನಾಗಿ ಮಾಡಿರುತ್ತದೆ."

"ಹಾಗಾದರೆ ಮುಂದೆ ಹ್ಯಾಗೆ ಮಾಡುವಿರಿ?"

"ಮಾಡುವದೇನು? ನನಗೇನೂ ತೋಚದಾಗಿದೆ. ಮಾನಹಾನಿಯು ಮರಣಕ್ಕಿಂತಲೂ ಕಡೆಯಾಗಿರುವದು. ಈ ಸಂಗತಿಯನ್ನು ಯಾರ ಮುಂದೂ ಬಿಚ್ಚಿ ಹೇಳುವಂತಿಲ್ಲ. ಕಾಂಚನವರ್ಮನಿಗೆ ಬರೆದು ತಿಳಿಸಬೇಕೇನು? ಏನೂ ಉತ್ತರ ಕೊಡದಿದ್ದರೆ ಅವನು ದಂಡೆತ್ತಿ ಬಂದು ನನ್ನೊಡನೆ ಯುದ್ಧವ ಹೂಡಿ ಸಾಕರಲ್ಲಿ ನನ್ನ ಬಾಳುವೆಯನ್ನು ಹಾಸ್ಯಕ್ಕೀಡುಮಾಡುವನು. ಹೀಗೆ ಮಾಡಿಸಿಕೊಳ್ಳುವದಕ್ಕಿಂತ ಮರಣವೇ ಲೇಸೆಂದು ನನಗೆ ತೋರುತ್ತದೆ. ಕಾಂಚನವರ್ಮನಿಗೆ ಏನಾದರೊಂದು ಉತ್ತರ ಬರೆದು ಕೃತಾಪರಾಧಕ್ಕಾಗಿ ಅಗ್ನಿಕಾಷ್ಠಗಳನ್ನು ಭಕ್ಷಿಸಬೇಕೆಂದು ಮಾಡಿದ್ದೇನೆ. ಇದೇ ನನಗೆ ಶರಣೋಪಾಯವು; ಅನ್ಯ ಉಪಾಯಗಳ ಅವಲಂಬನೆಯು ಈಗ ನನಗೆ ಸರಿಯಾಗಿ ತೋರುವದಿಲ್ಲ."

ಈ ಮೇರೆಗೆ ದ್ರುಪದರಾಜನು ನುಡಿದು ಚಟ್ಟನೆ ಅಲ್ಲಿಂದೆದ್ದು ದಿವಾಣಖಾನೆಗೆ ಹೊರಟುಹೋದನು. ಮಹಾರಾಜ್ಞಿಯು ಮುಂದೊದಗಬಹುದಾದ ಅನರ್ಥದ ಕಲ್ಪನೆಯಿಂದ ಗಡಗಡನೆ ನಡುಗಿ ಸ್ಮೃತಿಯಿಲ್ಲದೆ ದೊಪ್ಪನೆ ನೆಲಕ್ಕೆ ಬಿದ್ದು ಬಿಟ್ಟಳು. ಕುಲಸ್ತ್ರೀಯರಿಗೆ ಪತಿಯೇ ಪರಮಗತಿಯಲ್ಲವೇ? ಆ ಗತಿಗೆ ಅಳಿಗಾಲವುಂಟಾಯಿತೆಂದು ತಿಳಿಯಲು ಅವರು ಹೀಗೆ ಗತಿಗೆಡುವದರಲ್ಲೇನಾಶ್ಚರ್ಯವು? ದಾಸಿಯರು ಧಾವಿಸಿಬಂದು ಆ ಮಹಾರಾಜ್ಞಿಯನ್ನು ಉಪಚರಿಸಿ ಆಕೆಗೆ ಕ್ಷೇಮವನ್ನುಂಟು ಮಾಡಿದರು.

---

## [ ೨ ]

...

ದ್ರುಪದರಾಜನಿಗೆ ಬಹು ದಿವಸಗಳವರೆಗೆ ಮಕ್ಕಳಾಗಿರಲಿಲ್ಲ. ಆದ್ದರಿಂದ ಅವನು ಹೆಂಡತಿ ಸಮೇತನಾಗಿ ಯಮುನಾ ತೀರಕ್ಕೆ ಹೋಗಿ ಮೃಡಾನೀಪತಿಯನ್ನು ಕುರಿತು ತಪಸ್ಸನ್ನಾಚರಿಸಿದನು. ಭಕ್ತವತ್ಸಲನಾದ ಸಾಂಬನು ರಾಜನ ತಪಸ್ಸಿಗೆ ಮೆಚ್ಚಿ, ಒಂದು ದಿನ ಪ್ರತ್ಯಕ್ಷನಾದನು. ಆಗ ದ್ರುಪದನು ಇಷ್ಟಾರ್ಥವು ಫಲಿಸಿತೆಂದು ಹಿಗ್ಗಿ ಈಶ್ವರನಲ್ಲಿ ಪುತ್ರಯಾಚನೆಯನ್ನು ಮಾಡಿದನು. ಆಗ ಸದಾಶಿವನು ದ್ರುಪದರಾಜನನ್ನು ಕುರಿತು—''ಎಲೈ ರಾಜನೇ, ನಿನಗೆ ನನ್ನ ವರ ಪ್ರಸಾದದಿಂದ ಮೊದಲು ಹೆಣ್ಣು ಶಿಶುವು ಜನಿಸುವದು ಆದರೆ ಅದೇ ಮುಂದೆ ನನ್ನ ಪ್ರಸಾದ ಪ್ರಭಾವದಿಂದ ಗಂಡಸಾಗಿ ನಿನಗೆ ಸಂತೋಷವನ್ನುಂಟು ಮಾಡುವದು'' ಎಂದು ನುಡಿದು ಗುಪ್ತನಾದನು. ದ್ರುಪದ ರಾಜನಿಗೆ ಈ ಈಶಪ್ರಸಾದವನ್ನು ತಿಳಿದು ಆಶ್ಚರ್ಯವಾಯಿತು. ಮೊದಲು ಹೆಣ್ಣು ಹುಟ್ಟುವದೇಕೆ? ಮುಂದೆ ಅದು ಗಂಡಸಾಗುವದೇಕೆ? ಏನು ವಿಚಿತ್ರವಿದು!! ಹೆಣ್ಣು ಹೋಗಿ ಗಂಡಾಗಬಲ್ಲದೆ? ಈಶ್ವರನ ಲೀಲೆಯು ಅಗಾಧವಾದದ್ದು; ಆತನ ವರಪ್ರಸಾದವೇ ನಮಗೆ ಪ್ರಮಾಣವು ಎಂದು ಅಂದುಕೊಂಡು ನಗರಿಗೆ ಬಂದು ಎಂದಿನಂತೆ ರಾಜ್ಯ ಪರಿಪಾಲನೆ ಮಾಡತೊಡಗಿದನು. ಮುಂದೆ ಕೆಲದಿನಗಳಲ್ಲಿ ದ್ರುಪದನ ರಾಣಿಯು ಗರ್ಭವನ್ನು ತಾಳಿದಳು. ನವಮಾಸಗಳು ತುಂಬಲು ಒಂದು ಉತ್ಕೃಷ್ಟವಾದ ಹೆಣ್ಣುಶಿಶುವನ್ನು ಹಡೆದಳು. ರಾಜ್ಞಿಗೂ-ದ್ರುಪದರಾಜನಿಗೂ ಈಶಪ್ರಸಾದವು ಸ್ಮರಣೆಯಲ್ಲಿತ್ತು; ಆದ್ದರಿಂದ ಅವರು ಈ ಹೆಣ್ಣು ಶಿಶುವು ಮುಂದೆ ಗಂಡಸಾಗುವದರಿಂದ ಈಗಲೇ

ಈ ಶಿಶುವು ಗಂಡೆಂಬ ಸುದ್ದಿಯನ್ನು ಹುಟ್ಟಿಸಬೇಕೆಂದು ನಿಶ್ಚಯಿಸಿದರು. ಅರಮನೆಯ ದಾಸಿಯರಿಗೆ ಈ ಸಂಗತಿಯನ್ನು ಗುಟ್ಟಾಗಿರಿಸಬೇಕೆಂದು ಆಜ್ಞಾಪಿಸಿದರು. ದ್ರುಪದಮಹಾರಾಜನಿಗೆ ಪುತ್ರೋತ್ಸವವಾಯಿತೆಂದು ನಗರಿಯಲ್ಲೆಲ್ಲ ಸುದ್ದಿಯು ಪಸರಿಸಿತು.

ಸಾಮಾನ್ಯರಾದವರಿಗೇ ಪುತ್ರೋತ್ಪತ್ತಿಯಾದರೆ ಅನೇಕಬಗೆಯ ಉತ್ಸವಗಳು ನಡೆಯುತ್ತಿರಲು, ದ್ರುಪದನಂಥ ಮಹಾರಾಜನಿಗೆ ಪುತ್ರೋತ್ಪತ್ತಿಯಾದ ಬಳಿಕ ಕೇಳುವದೇನು? ಅದರಲ್ಲೂ ಬಹು ದಿವಸಕ್ಕೆ ಪುತ್ರೋತ್ಸವ; ಮೇಲಾಗಿ ಈಶಪ್ರಸಾದದಿಂದ ಆದ ಸಂತತಿ; ಆದ್ದರಿಂದ ರಾಜನಿಗಿಂತಲೂ ಪ್ರಜೆಗಳ ಕುಣಿದಾಟವೇ ಹೆಚ್ಚಾಯಿತು. ಪೂರ್ವಕಾಲದಲ್ಲಿ ರಾಜರಿಗೆ ಏನಾದರೂ ಸಂತೋಷಪ್ರಸಂಗವುಂಟಾದರೆ ಪ್ರಜೆಗಳಿಗೆ ರಾಜನ ಹತ್ತು ಪಾಲು ಸಂತೋಷವಾಗುತ್ತಿತ್ತು. ಯಾಕಂದರೆ ರಾಜ-ಪ್ರಜರ ಸಂಬಂಧವೇ ಅಷ್ಟೊಂದು ರಹಸ್ಯವಾಗಿರುತ್ತಿತ್ತು. ಅದರಂತೆ ದ್ರುಪದರಾಜನಿಗೆ ಆದ ಪುತ್ರೋತ್ಸವದಲ್ಲಿ ಪ್ರಜೆಗಳು ತಮ್ಮ ಆನಂದವನ್ನು ವ್ಯಕ್ತಗೊಳಿಸುವದಕ್ಕೋಸ್ಕರ ರಾಜನಿಗೆ ಶಕ್ತ್ಯನುಸಾರ ಕಾಣಿಕೆಗಳನ್ನು ಸಮರ್ಪಿಸಿದರು. ರಾಜನಾದರೂ ನಗರಿಯನ್ನು ಶೃಂಗರಿಸಿ ಬಹು ದಿವಸಗಳ ವರೆಗೆ ದೇವತಾ ಆರಾಧನೆಗಳನ್ನು ನಡಿಸಿದನು. ಬ್ರಾಹ್ಮಣರಿಗೆ ಅಸಂಖ್ಯ ದಕ್ಷಿಣೆ-ದಾನಗಳನ್ನು ಕೊಟ್ಟನು. ಸಮಸ್ತ ಪ್ರಜೆಗಳನ್ನು ಮಿಷ್ಟಾನ್ನದಿಂದ ತೃಪ್ತಗೊಳಿಸಿದನು.

ಹುಟ್ಟಿದ ಶಿಶುವಿಗೆ ಹನ್ನೆರಡನೆಯ ದಿವಸ 'ಶಿಖಂಡಿ' ಎಂದು ನಾಮಕರಣವನ್ನು ಮಾಡಿದರು. ಶಿಖಂಡಿಯು ಬೆಳೆಯಹತ್ತಲು ಪುರುಷವೇಷಗಳನ್ನೇ ತೊಡಿಸತೊಡಗಿದರು. ಅರಮನೆಯ ಒಬ್ಬಿಬ್ಬರು ದಾಸಿಯರ ಹೊರತು ಶಿಖಂಡಿಯು ಹೆಂಗಸೆಂಬದು ಯಾರಿಗೂ ಗೊತ್ತಿರಲಿಲ್ಲ. ದ್ರುಪದನೂ, ಆತನ ರಾಜ್ಞಿಯೂ ಬಹು ಎಚ್ಚರಿಕೆಯಿಂದ ಆ ಶಿಶು

ವನ್ನು ಸಂರಕ್ಷಿಸಿದರು. ಶಿಶುವು ಒಂದು ವರ್ಷದ್ದಾಯಿತು; ಎರಡು ವರ್ಷದ್ದಾಯಿತು. ಆದರೂ ಹೆಣ್ಣು ಹೋಗಿ ಗಂಡಾಗಲಿಲ್ಲ. ದ್ರುಪದನೂ, ರಾಜ್ಞಿಯೂ ಚಿಂತೆಗೊಳಗಾದರು. ಆದರೂ ಈಶಪ್ರಸಾದದ ಮೇಲೆ ಪೂರ್ಣವಾಗಿ ವಿಶ್ವಾಸವಿದ್ದದರಿಂದ ಮನಸ್ಸಿನ ದುಗುಡವನ್ನು ದೂಡಿ ಶಾಂತರಾದರು ಹೀಗೆಯೇ ಹತ್ತು-ಹನ್ನೆರಡು ವರುಷಗಳು ಕಳೆದವು. ಶಿಖಂಡಿಯನ್ನು ಪುರುಷ ವೇಷದಿಂದ ಜತನಮಾಡಬೇಕಾದರೆ, ಆ ರಾಜ ದಂಪತಿಗಳಿಗೆ ಸಾಕ-ಸಾಕಾಗಿಹೋಯಿತು. ಹನ್ನೆರಡನೆಯ ವರುಷವು ತುಂಬಿ ಹದಿಮೂರನೆಯ ವರುಷವು ಪ್ರಾರಂಭಿಸಿತು. ಶಿಖಂಡಿಯಲ್ಲಿ ಸ್ತ್ರೀತ್ವದ ಚಿನ್ಹಗಳು ವಿಕಾಸಹೊಂದತೊಡಗಿದವು. ಸ್ತನ್ಯಗಳು ಕಸುವಿನಿಂದ ವಕ್ಷಸ್ಥಳವನ್ನು ಆಕ್ರಮಿಸತೊಡಗಿದವು. ಪ್ರಾಯದ ಲಕ್ಷಣವು ಮುಖಮಂಡಲದ ಮೇಲೆ ನರ್ತಿಸತೊಡಗಿತು. ಆಗಂತೂ ಆ ರಾಜದಂಪತಿಗಳ ಸೊಂಡೆಯೊಣಗಿತು. ಇನ್ನೂ ನಮ್ಮ ಶಿಖಂಡಿಯು ಗಂಡಸಾಗಲಿಲ್ಲವಲ್ಲ! ಎಂದು ಹಂಬಲಿಸಿದರು. ಅವರಲ್ಲಿ ಶಿಖಂಡಿಯ ವಿಷಯವಾಗಿ ಚಿಂತೆಯುಂಟಾದಾಗೆಲ್ಲ ಅವರ ಸದಸದ್ವಿವೇಕವು ಅವರ ಕಿವಿಯಲ್ಲಿ " ಈಶಪ್ರಸಾದದ ವಿಷಯವಾಗಿ ಹೀಗೆ ಸಾಂಶಕರಾಗುವರೇ? ಆ ಪ್ರಭುವಿನ ವಚನದ ಮೇಲೆ ನಿಮಗೆ ನಂಬಿಕೆಯಿಲ್ಲವೇ? " ಎಂದು ಕೇಳುತ್ತಿತ್ತು. ಆದ್ದರಿಂದ ಆ ದಂಪತಿಗಳು ಪುನಃ ಸಮಾಧಾನವನ್ನು ತಾಳುತ್ತಿದ್ದರು.

ಈ ರೀತಿ ಪಾಂಚಾಲ ರಾಜದಂಪತಿಗಳು ಕಾಲಕ್ರಮಣ ಮಾಡುತ್ತಿರಲು, ಶಿಖಂಡಿಗೆ ಹದಿನಾರು ವರುಷಗಳು ತುಂಬಿದವು, ಆತನಿಗೆ ಕನ್ಯೆಯೊಡನೆ ವಿವಾಹಮಾಡಬೇಕೋ, ಪುರುಷನೊಡನೆ ವಿವಾಹಮಾಡಬೇಕೋ ಎಂಬ ಬಲವಾದ ಚಿಂತೆಯು ಅವರನ್ನು ಬಾಧಿಸಿತು. ವರವನ್ನು ಗೊತ್ತುಮಾಡಿ ವಿವಾಹಮಾಡಿದರೆ, ಇದುವರೆಗೆ ತಾವು ಮಾಡಿದ ಸಾಹಸವೆಲ್ಲ ವ್ಯರ್ಥವಾಗಿ ಲೋಕಹಾಸ್ಯಕ್ಕೆ ಕಾರಣರಾಗುವೆವಲ್ಲದೆ,

ಈಶಪ್ರಸಾದದಲ್ಲಿ ಅಶ್ರದ್ಧೆಯನ್ನು ತಾಳಿದಂತಾಗುತ್ತದೆ. ಎಂಬ ವಿಚಾರಗಳು ಅವರಲ್ಲುಂಟಾದವು. ಈ ವಿಚಾರಗಳಿಂದ ಆ ದಂಪತಿಗಳಿಬ್ಬರು ಬಹಳ ಹೈರಾಣಾದರು. ಕನ್ಯೆಯನ್ನು ಗೊತ್ತುಮಾಡಿ ಲಗ್ನಮಾಡಿದರೆ, ಮುಂದೇನು ಅನರ್ಥವೊದಗುವದೋ ಎಂಬ ವಿಚಾರಗಳೂ ಅವರಲ್ಲಿ ಬಂದವು. ಈಶಪ್ರಸಾದದ ಮೇಲೆ ಬಲವಾದ ನಂಬಿಕೆಯಿದ್ದುದರಿಂದ ಏನೇ ಆಗಲಿ, ಕನ್ಯೆಯನ್ನು ಗೊತ್ತುಮಾಡಿ ಲಗ್ನಮಾಡಬೇಕೆಂದು ನಿರ್ಧರಿಸಿದರು.

ದಾಶಾರ್ಣದೇಶದ ರಾಜನಾದ ಕಾಂಚನವರ್ಮನು ಸರಿಕರಾಜನಾಗಿದ್ದನು. ಆತನಿಗೆ ಲಾವಣ್ಯವತಿಯೆಂದೋರ್ವ ಮಗಳಿದ್ದಳು. ದ್ರುಪದರಾಜನು ತನ್ನ ಮಗನಾದ ಶಿಖಂಡಿಗೆ ಆ ಲಾವಣ್ಯವತಿಯನ್ನು ಗೊತ್ತುಪಡಿಸಿದನು. ಸಮಾನಸ್ಕಂದನಾದ ದ್ರುಪದರಾಜನ ಮನೆಗೆ ಕನ್ಯೆಯನ್ನು ಕೊಡುವದಕ್ಕೆ ಕಾಂಚನವರ್ಮನು ಕಿಂಚಿತ್ತಾದರೂ ಹಿಂದೆ ಮುಂದೆ ನೋಡಲಿಲ್ಲ. ಘಟಿತಾರ್ಥದಲ್ಲಿಯೂ ಉತ್ತಮ ಗುಣಗಳು ಕೂಡಿ ಬಂದವು. ಶಿಖಂಡಿಯು ನೋಡಲಿಕ್ಕೆ ಸುಂದರನೂ ಪ್ರಾಯದಿಂದ ಕೊಬ್ಬೇರಿದವನೂ ಆದದ್ದರಿಂದ ವರ ಪರೀಕ್ಷೆಗೆ ಯಾರೂ ಅಷ್ಟೊಂದು ಲಕ್ಷ್ಯವನ್ನು ಕೊಡಲಿಲ್ಲ. ಮೇಲಾಗಿ ರಾಜಪುತ್ರನನ್ನು ಯಾರು ಪರೀಕ್ಷಿಸಿ ನೋಡಹೋಗುವರು? ವಿಧಿಪೂರ್ವಕವಾಗಿ ವಿವಾಹ ಮಹೋತ್ಸವವು ನೆರವೇರಿತು. ವಿವಾಹ ಕಾಲಕ್ಕೆ ಶಿಖಂಡಿಯ ಸ್ತ್ರೀತ್ವವು ಬೈಲಿಗೆ ಬೀಳಬಾರದೆಂದು ದ್ರುಪದರಾಜನೂ ಆತನ ಹೆಂಡತಿಯೂ ಬಹಳವಾಗಿ ಜಪ್ಪಿಸಿದರು. ನಿರ್ವಿಘ್ನದಿಂದ ಕಾರ್ಯವು ಸಾಂಗವಾಗಿ ದ್ರುಪದನು ತನ್ನ ರಾಜಧಾನಿಗೆ ಬಂದನು; ಮುಂದೆ ಸ್ವಲ್ಪ ದಿವಸಗಳಲ್ಲಿ ಸೊಸೆಯೂ ಮನೆಗೆ ಬಂದಳು.

ದ್ರುಪದರಾಜನು ಇಲ್ಲಿಯ ವರೆಗೆ ಶಿಖಂಡಿಯ ಸ್ತ್ರೀ ರೂಪವನ್ನು ಬಚ್ಚಿಟ್ಟಂತೆ ಇನ್ನು ಮುಂದೆ ಹಾಗೆ ಮಾಡುವದು ಅಶಕ್ಯವಾ

ಯಿತು. ಯಾಕೆಂದರೆ ಪ್ರಬುದ್ಧನಾದ ಶಿಖಂಡಿಯು ಲಾವಣ್ಯವತಿಯಾದ ಹೆಂಡತಿಯೊಡನೆ ಸಂಸಾರ ಮಾಡಬೇಕಾಯಿತು. ಆದರೆ ಲೋಕವಿಲಕ್ಷಣವಾದ ಈ ವಿವಾಹದಿಂದ ಸಂಸಾರಧರ್ಮವು ನಡೆಯಬಹುದೇ! ಶಿಖಂಡಿಯ ಹೆಂಡತಿಯು ಮನೆಗೆ ಬಂದು ಬಹುದಿವಸಗಳಾದರೂ ಆಕೆಗೆ ಗಂಡನ ದರುಶನವೇ ಇಲ್ಲದಾಯಿತು. ರಾಜಪುತ್ರನು ತನ್ನೆಡೆಗೆ ಬರದಿರುವದಕ್ಕೆ ಕಾರಣವೇನೆಂದು ಆ ಸುಂದರಿಯು ಚಿಂತಾಮಗ್ನಳಾದಳು. ಯಾವ ಕಾರಣವೂ ಇಲ್ಲದೆ ಪಾಣಿಗ್ರಹಣ ಮಾಡಿದ ಮಡದಿಯನ್ನು ಬಿಡುವದು ಶಿಷ್ಟಸಮ್ಮತವಲ್ಲದ್ದರಿಂದ ಧರ್ಮಜ್ಞನಾದ ದ್ರುಪದರಾಜಕುವರನು ಹೀಗೇಕೆ ಮಾಡುತ್ತಿರಬಹುದೆಂಬದರ ಗೂಢವು ಅವಳಿಗೆ ತಿಳಿಯದಾಯಿತು. ಪಾಪ! ಆ ಸುರಸುಂದರಿಯು ಬಹುದಿವಸಗಳ ವರೆಗೆ ಮನದಲ್ಲಿಯೇ ವ್ಯಥೆಗೊಂಡು ಈ ಸಂಗತಿಯನ್ನು ತನ್ನ ವಿಶ್ವಾಸಿಕಳಾದ ಓರ್ವ ದಾಸಿಗೆ ತಿಳಿಸಿದಳು.

ಅಂತಃಪುರವಾಸಿಗಳಾದ ದಾಸಿಯರು ಬಹು ಚತುರರಿರುವರು. ಯಾರೊಬ್ಬರ ಇಂಗಿತವನ್ನು ಅವರು ಸಹಜವಾಗಿ ತಿಳಿಯಬಲ್ಲರು. ಆದ್ದರಿಂದ ತನ್ನ ಒಡತಿಯು ಹೇಳಿದ ವಿಷಯವು ಆ ದಾಸಿಯ ಮನಸ್ಸಿಗೆ ಬಹಳವಾಗಿ ಹತ್ತಿತು. ಅವಳು ಶಿಖಂಡಿಯು ಅಂತಃಪುರಕ್ಕೆ ಬರದಿರುವದಕ್ಕೆ ಕಾರಣವನ್ನು ಈ ಮೊದಲೇ ಕಂಡುಹಿಡಿಯಬೇಕಾಗಿತ್ತೆಂದು ಬಹಳವಾಗಿ ಮಿಡುಕಿ ಇನ್ನು ಮೇಲಾದರೂ ಪ್ರಯತ್ನಮಾಡಬೇಕೆಂದು ನಿರ್ಧರಿಸಿದಳು. ಅವಳು ತನ್ನ ಮನೋಇಂಗಿತವನ್ನು ಅನ್ಯರಿಗೆ ತಿಳಿಯಗೊಡದೆ ಶಿಖಂಡಿಯ ಆಚರಣೆಯ ಮೇಲೆ ಬಲವಾದ ಪಾಳತಿಯನ್ನಿಟ್ಟಳು. ಶಿಖಂಡಿಯು ಅತಿಗೌಪ್ಯವಾಗಿ ಸ್ನಾನ-ಊಟ ಮೊದಲಾದವುಗಳನ್ನು ಮಾಡುತ್ತಿರುವದನ್ನು ಕಂಡು ಅವಳಿಗೆ ಸಂಶಯ ಹುಟ್ಟಿತು. ಅವಳು ಶಿಖಂಡಿಯ ರೂಪವನ್ನು ದಿಟ್ಟಿಸಿ ನೋಡಿ ಈತನು ಪುರುಷನಾಗಿರದೆ ಸ್ತ್ರೀಯೆಂದು ನಿರ್ಧರಿಸಿದಳು. ಆದರೂ

ಪರೀಕ್ಷಿಸದೆ ಈ ಸುದ್ದಿಯನ್ನು ತನ್ನ ಒಡತಿಗೆ ತಿಳಿಸಬಾರದೆಂದು ಮನಸ್ಸಿನಲ್ಲಿಟ್ಟುಕೊಂಡಳು.

ಶಿಖಂಡಿಯು ಸ್ನಾನಗೃಹವನ್ನು ಆ ಚತುರೆಯು ಗೊತ್ತು ಹಚ್ಚಿ ಒಂದು ದಿನ ಯಾರಿಗೂ ತಿಳಿಯದಂತೆ ಅದರಲ್ಲಿ ಅಡಗಿ ಕುಳಿತಳು. ಆ ನಿರ್ಮಾನುಷ ಮಜ್ಜನ ಗೃಹದಲ್ಲಿ ಶಿಖಂಡಿಯು ಪ್ರತಿನಿತ್ಯ ನಿರ್ಭಯದಿಂದ ಸ್ನಾನ ಮಾಡುತ್ತಿದ್ದನು; ಅದರಂತೆ ಈ ದಿನವೂ ಸ್ನಾನ ಮಾಡಲಾರಂಭಿಸಿದನು. ಪಾಪ! ತನ್ನ ಪರೀಕ್ಷಾರ್ಥವಾಗಿ ದಾಸಿಯು ಅಲ್ಲಿ ಅಡಗಿರುವಳೆಂಬದು ಅವನಿಗೇನು ಗೊತ್ತು? ಶಿಖಂಡಿಯ ಸ್ತ್ರೀ ರೂಪವನ್ನು ನೋಡಿ ದಾಸಿಯು ಅಚ್ಚರಿಗೊಂಡಳು. ಸುವರ್ಣದ ಕಲಶಗಳನ್ನು ಕೋಲುತ್ತಿದ್ದ ಸ್ತನಮಂಡಲಗಳೂ,ತುಂಬಿದ ನಿತಂಬಗಳೂ ಆ ದಾಸಿಗೆ ಸ್ಪಷ್ಟವಾಗಿ ಕಂಡು ಬಂದವು. ಅವಳು ತನ್ನ ಒಡತಿಯ ದುರ್ದೈವದ ವಿಷಯವಾಗಿ ಮನದಲ್ಲಿಯೇ ಮರುಗಿ ಶಿಖಂಡಿಯು ಮಜ್ಜನಗೃಹದಿಂದ ಹೊರಟು ಹೋದ ಬಳಿಕ ಅಲ್ಲಿಂದ ಹೊರಬಿದ್ದಳು.

ಇತ್ತ ಅಂತಃಪುರದಲ್ಲಿ ಶಿಖಂಡಿಯ ರಾಣಿಯು ಆಳವಾದ ಚಿಂತಾಸಮುದ್ರದಲ್ಲಿ ಮುಳುಗಿ ಶೂನ್ಯಮನಸ್ಕಳಾಗಿ ಕುಳಿತುಕೊಂಡಿದ್ದಳು. ಅಷ್ಟರಲ್ಲಿ ಮ್ಲಾನವದನಳಾದ ದಾಸಿಯು ಅಲ್ಲಿಗೆ ಬಂದಳು. ದಾಸಿಯ ಮೋರೆಯ ಮೇಲೆ ಉಲ್ಲಸಿತಕಳೆಯಿರದ್ದರಿಂದ ಏನೋ ಅವಲಕ್ಷಣವಿದೆಯೆಂದು ಆ ಸುಂದರಿಯು ತಿಳಿದಳು. ದಾಸಿಯು ಏನನ್ನೂ ಮಾತನಾಡದೆ ಸುಮ್ಮನೆ ನಿಂತಳು. ತನ್ನ ಒಡತಿಯ ದುರದೃಷ್ಟವನ್ನು ಏನೆಂದು ಹೇಳಬೇಕೆಂದು ಆಕೆಯು ಮೌನವನ್ನೇ ತಾಳಿದಳು. ದಾಸಿಯ ಈ ಮೌನದಿಂದ ಆ ತರುಣಿಯ ಚಿಂತೆಯು ಹೆಚ್ಚಾಯಿತು; ಅವಳು ದಾಸಿಯನ್ನು ಕುರಿತು ತಾನೇ ಪ್ರಶ್ನೆಮಾಡಿದಳು. ಒಡತಿಯು ಕೇಳಿದ ಬಳಿಕ ನಿರ್ವಾಹವಿಲ್ಲದೆ ಆಕೆಯು ತಾನು ಕಂಡ ಎಲ್ಲ ಸಂಗತಿಗಳನ್ನು ಒಂದುಳಿಯದಂತೆ ಹೇಳಿದಳು.

ದಾಸಿಯು ಹೇಳಿದ ಸಂಗತಿಯಿಂದ ಆ ತರುಣಿಯ ಮೇಲೆ ಆಕಾಶವೇ ಕಳಚಿ ಬಿದ್ದಂತಾಯಿತು. ತಾನು ಯಾರೊಡನೆ ಲಗ್ನವಾಗಿರುವೆನೋ ಆತನು ಪುರುಷನಾಗಿರದೆ ಸ್ತ್ರೀಯಾಗಿರುವನೆಂಬದನ್ನು ತಿಳಿದು ಅವಳಿಗೆ ಪರಮ ಸಂತಾಪವಾಯಿತು. ತನ್ನ ಮಾವನಾದ ದ್ರುಪದನು ಈ ಭಯಂಕರ ಕೆಲಸವನ್ನು ಯಾಕೆ ಮಾಡಿದನು? ತನ್ನ ಮಗಳಿಗೆ ನನ್ನನ್ನು ಲಗ್ನಮಾಡುವದರಿಂದ ಆತನಿಗೆ ಬಂದ ಸೌಭಾಗ್ಯವೇನು? ಇತ್ಯಾದಿ ವಿಚಾರಗಳಿಂದ ಅವಳ ಮನಸ್ಸು ಕಡುನೊಂದುಕೊಂಡಿತು. ಬಳಿಕ ಅವಳು ತನ್ನ ಗಂಡನೆನಿಸಿದ ಶಿಖಂಡಿಯ ಸ್ತ್ರೀತ್ವವನ್ನು ತಾನು ಕಣ್ಣಾರೆ ಕಾಣಲೆಳಸಿ ದಾಸಿಯ ಸಹಾಯದಿಂದ ಅದನ್ನು ಸಿದ್ಧಿಗೆ ಮುಟ್ಟಿಸಿದಳು. ಗಂಡನು ಹೆಂಗಸೆಂಬದು ಅವಳಿಗೆ ಪ್ರತ್ಯಕ್ಷ ನಿದರ್ಶನಕ್ಕೆ ಬಂದಿತು. ಆಗ ಅವಳು ಸಂತಾಪದಿಂದ ಬೆಂಗು ಬೆಂಡಾಗಿ ತನ್ನ ಆಯುಷ್ಯದ ಇತಿಶ್ರೀ ಆಯಿತೆಂದು ತಿಳಿದು ಅದೇ ಕಾಲದಲ್ಲಿ ತನ್ನ ತಂದೆಗೆ ಒಂದು ಪತ್ರಬರೆದು ಅದನ್ನು ಆ ದಾಸಿಯ ಕೈಯಲ್ಲಿ ಕೊಟ್ಟಳು. ದಾಸಿಯು ದ್ರುಪದನಿಗೆ ತಿಳಿಯದಂತೆ ಚೋರಮಾರ್ಗದಿಂದ ರಾಜಧಾನಿಯಿಂದ ಹೊರಬಿದ್ದು ಕಾಂಚನವರ್ಮನಿಗೆ ಪತ್ರವನ್ನು ಮುಟ್ಟಿಸಿದಳು.

ಸ್ತ್ರೀಗೆ ಸ್ತ್ರೀಯು ಲಗ್ನವಾದ ವದೆಂದರೆ ಲೋಕವಿಲಕ್ಷಣವೆಂಬದನ್ನು ಬರೆಯುವ ಕಾರಣವಿಲ್ಲ. ಇಂಥ ವಿವಾಹವು ಯಾರಿಗೆ ಸಮ್ಮತವಾದೀತು? ಪ್ರಯೋಜನವಾದರೂ ಏನು; ಇಂಥ ಅಲೌಕಿಕ ಸಂಗತಿಯು ಸಂಭವಿಸಿದ ಸಂಗತಿಯ ಪತ್ರವು ಮಗಳಿಂದ ಬರಲು, ಕಾಂಚನ ವರ್ಮನು ತಪ್ತನಾದನು. ದ್ರುಪದನು ತನ್ನ ಮಗಳ ಕುತ್ತಿಗೆ ಕೊಯ್ದನೆಂದು ಅವನು ವ್ಯಾಘ್ರನಂತೆ ಕ್ರುದ್ಧನಾದನು. ದ್ರುಪದನ ಗಂಟಲು ಸೀಳಲಿಯಾ ಎಂಬ ರೋಷವು ಅವನಿಗೆ ಹುಟ್ಟಿತು. ಆಗಲೇ ಅವನು ದಂಡೆತ್ತಿ ದ್ರುಪದನ ಮೇಲೆ ಸಾಗತಕ್ಕವನು. ಆದರೆ

ಆತನ ವೃದ್ಧಮಂತ್ರಿಗಳು—ನಡೆದ ಪ್ರಕಾರವು ಸತ್ಯವೋ ಎಂಬದನ್ನು ಪ್ರತ್ಯಕ್ಷವಾಗಿ ಕಾಣದೆ ಹೀಗೆ ಆಸ್ಪದ ಕೊಡುವದು ಉಚಿತವಲ್ಲೆಂದು ಹೇಳಿದ್ದರಿಂದ ವರ್ಮನು ಸ್ವಲ್ಪ ಸಮಾಧಾನ ತಾಳಿ ದ್ರುಪದನಿಗೆ ಒಂದು ಪ[ತ್ರ] ಬರೆದು ಕಳುಹಿಸಿದನು. ಆ ಪತ್ರದಲ್ಲಿ—ನೀನು ನಿನ್ನ ಮ[ಗಳಿಗೆ] ಪುರುಷವೇಷವನ್ನು ಹಾಕಿ ಮಗನೆಂದು ಲೋಕದಲ್ಲಿ ಪ್ರಸಿದ್ಧಗೊ[ಳಿಸಿ] ಆ ಕೃತ್ರಿಮ ಮಗನಿಗೆ ನನ್ನ ಮಗಳನ್ನು ಲಗ್ನ ಮಾಡಿಕೊಂ[ಡು] ಭಯಂಕರ ಅಪರಾಧವನ್ನು ಆಚರಿಸಿರುತ್ತೀ; ಇದು ನಿಜವಾಗಿದ್ದ ಪಕ್ಷದಲ್ಲಿ ಯುದ್ಧಮುಖದಿಂದ ನಿನ್ನ ಶಾಸನ ಮಾಡಿ ಲೋಕದಲ್ಲಿ ಸಂಭಾವಿತರಾದವರು ಎಂಥ ಭಯಂಕರ ಕೃತ್ಯ ಮಾಡುವರೆಂಬದನ್ನು ಜಗತ್ತಿಗೆ ಶ್ರುತಪಡಿಸುತ್ತೇನೆ. ಈ ಸಂಗತಿಯು ಮಿಥ್ಯವಾಗಿದ್ದಪಕ್ಷದಲ್ಲಿ ಅಳಿಯನನ್ನು ಇಲ್ಲಿಗೆ ಕಳುಹಿಕೊಡು'' ಇತ್ಯಾದಿ ಸಂಗತಿಯು ಬರೆಯಲ್ಪಟ್ಟಿತ್ತು. ಈ ಪತ್ರವನ್ನು ಓದಿಯೇ ದ್ರುಪದನು ಹಾಹಾ[ಕಾ]ರ ಅಗ್ನಿಕಾಷ್ಠಗಳನ್ನು ಭಕ್ಷಿಸುವ ನಿಶ್ಚಯವನ್ನು ಮಾಡಿದ್ದನು.



## [೪]

...

ದ್ರುಪದರಾಜ ದಂಪತಿಗಳು ಮಾಡುವ ಈ ಸಂಭಾಷಣವನ್ನು ಶಿಖಂಡಿಯು ಮರೆಯಲ್ಲಿ ನಿಂತು ಕೇಳಿದನು. ಮತ್ತು ಕಾಂಚನ ವರ್ಮನಿಂದ ಬಂದ ಪತ್ರದ ಸಂಗತಿಯನ್ನೂ ತಿಳಿದನು. ಆದರಿಂದ ಅವನ ಮನಸ್ಸಿಗೆ ಬಹಳ ಕೆಡಕೆನಿಸಿತು. ತನ್ನ ಸಲುವಾಗಿ ತನ್ನ ತಂದೆಯು ಅಗ್ನಿಕಾಷ್ಠಭಕ್ಷಣ ಮಾಡುವಂಥ ಕಠಿಣ ಪ್ರಸಂಗವು

...ಷು ಅವನು ಬಹಳ ದುಃಖಕ್ಕೊಳಗಾದನು. ತಾನು ...ಸಿ ಹೀಗೆ ಪುರುಷವೇಷದಿಂದ ಬೆಳೆದದ್ದು ಭಯಂಕರ ...ರಣವಾಯಿತೆಂಬದು ಅವನ ಲಕ್ಷ್ಯದಲ್ಲಿ ಬಂದಿತು. ಲಗ್ನ ...ಡ ಹೆಂಡತಿಯನ್ನು ಮೂಲೆಗುಂಪು ಮಾಡಿ ಕೊಡಿಸಿದೆನು. ...ದೆಗೆ ಅಗ್ನಿಕಾಷ್ಠ ಭಕ್ಷಣ ಮಾಡುವ ಪ್ರಸಂಗವನ್ನುಂಟು ...ನು. ಶ್ರೇಷ್ಠವಾದ ನಮ್ಮ ವಂಶವನ್ನು ಲೋಕದವರ ಅಪಹಾ ...ಡು ಮಾಡಿದೆನು. ಹಾಯ್! ಹಾಯ್! ನನ್ನ ಜನ್ಮಕ್ಕೆ ಧಿಕ್ಕಾ ...! ಇಂಥ ನಾನು ಇನ್ನು ಮುಂದೆ ಭೂಮಿಯ ಮೇಲೆ ಬದುಕಿರ ...ಾರದು ಎಂದು ಯೋಚಿಸಿದನು. ಯೋಚನೆಯು ಸಿದ್ಧವಾದ ಕೂಡಲೇ ತಡ; ಆತನು ಅರಮನೆಯನ್ನು ತ್ಯಜಿಸಿ ಅರಣ್ಯವನ್ನು ಸೇರಿದನು. ಶಿಖಂಡಿಯ ಮನಸ್ಸಿನಲ್ಲಿ ಪ್ರಾಣತ್ಯಾಗ ಮಾಡುವದಿತ್ತು, ಆದರೆ ಈಶಪ್ರಸಾದದ ಮಹಿಮೆಯು ಅವನನ್ನು ಹಾಗೆ ಮಾಡಗೊಡಲಿಲ್ಲ. ಅವನಿಗೆ ಎಲ್ಲಿಗಾದರೂ ಹೋಗಿ ತಪಸ್ಸು ಮಾಡಬೇಕೆಂಬ ಬುದ್ಧಿ ಹುಟ್ಟಿತು. ಇಂಥಲ್ಲಿಗೇ ಹೋಗಬೇಕೆಂಬ ನಿಯಮವಿಲ್ಲದ್ದರಿಂದ ಆತನು ದಾರಿ ಸಿಕ್ಕತ್ತ ನಡೆದನು. ಹೀಗೆ ಅವನು ಹೋಗುತ್ತಿರಲು ಒಂದು ಸುಂದರವಾದ ಉದ್ಯಾನವು ಹತ್ತಿತು. ಆ ಉದ್ಯಾನದ ರಮಣೀಯತೆಯನ್ನು ನೋಡಿ ಶಿಖಂಡಿಯ ಮನಸ್ಸಿನಲ್ಲಿ ಅಲ್ಲಿಯೇ ತಪಸ್ಸು ಮಾಡಬೇಕೆಂಬ ಇಚ್ಛೆಯು ಉಂಟಾಯಿತು. ತಪಸ್ಸಿಗೆ ಯೋಗ್ಯವಾಗಿ ಆ ಉದ್ಯಾನವು ಅತ್ಯಂತ ಪ್ರಶಾಂತವಾಗಿತ್ತು. ನಿರ್ಮಲ ನೀರಿನ ಝರಿಗಳು ಅಲ್ಲಿ ಅಸಂಖ್ಯವಾಗಿದ್ದವು. ಕಿತ್ತಳೆ, ಅಂಜೀರ, ದ್ರಾಕ್ಷೆ ಮೊದಲಾದ ಫಲವೃಕ್ಷಗಳು ಅಲ್ಲಿ ಹೇರಳವಾಗಿದ್ದವು. ಶಿಖಂಡಿಯು ಆ ಉದ್ಯಾನವು ಯಾರದೆಂಬದನ್ನು ಕೂಡಾ ವಿಚಾರಿಸುವ ಗೊಡವೆಗೆ ಹೋಗದೆ ಅಲ್ಲಿಯೇ ತಳವೂರಿದನು; ಮತ್ತು ಈಶ್ವರನನ್ನು ಕುರಿತು ಕಠಿಣತರವಾದ ತಪಸ್ಸನ್ನಾಚರಿಸ ತೊಡಗಿದನು.

ಹೀಗೆ ಶಿಖಂಡಿಯು ತಪಸ್ಸು ಕೆಲದಿನಗಳ ವರೆಗೆ ಸ ಆತನು ತಪಸ್ಸನ್ನು ಮಾಡುತ್ತಿದ್ದ ಉದ್ಯಾನವು ಕುಬೇರನದಾ ಸ್ಥೂಣಾಕರ್ಣನೆಂಬ ಒಬ್ಬ ಯಕ್ಷನು ಆ ಪ್ರದೇಶದ ಅಧಿಕಾರಿ ದ್ದನು. ಒಂದು ದಿನ ಸ್ಥೂಣಾಕರ್ಣನು ಉದ್ಯಾನದ ವ್ಯವಸ್ಥೆ ಯನ್ನು ನೋಡುವದಕ್ಕೆ ಹೊರಟು ತಿರುಗಾಡುತ್ತ ಶಿಖಂಡಿಯು ತಪ ಮಾಡುತ್ತಿದ್ದ ಸ್ಥಳಕ್ಕೆ ಬಂದನು. ಯಕ್ಷರ ವಾಸಸ್ಥಳದಲ್ಲಿ ಈ ಯಾವ ಮನುಷ್ಯನು ತಪಸ್ಸನ್ನಾಚರಿಸುವನೆಂಬದು ಅವನಿಗೆ ತಿಳಿಯ ದಾಯಿತು. ಆಗಲವನು ಹತ್ತಿರ ಹೋದನು. ಶಿಖಂಡಿಯು ಧ್ಯಾನ ಸ್ಥನಾಗಿ ಕುಳಿತುಕೊಂಡಿದ್ದನು. ತಪಸ್ಸು ಮಾಡುವ ವ್ಯಕ್ತಿಯು ಪುರುಷವೇಷಧಾರಿಯಾದರೂ ಸುಂದರ ಯುವತಿಯಾಗಿರಬೇಕೆಂದು ಆ ಯಕ್ಷನು ತರ್ಕಿಸಿದನು. ಈ ಸ್ತ್ರೀಯು ಹೀಗೆ ಪುರುಷವೇಷದಿಂದ ಇಲ್ಲಿ ತಪಸ್ಸು ಮಾಡುವಕಾರಣವೇನು? ಇವಳು ಯಾರು? ಇತ್ಯಾದಿ ಸಂಗತಿಗಳನ್ನು ತಿಳಿದುಕೊಳ್ಳಲು ಆತನಲ್ಲಿ ಕುತೂಹಲವುಂಟಾಯಿತು.

ಸ್ತ್ರೀ ವಿಷಯವು ಬಲು ಕೆಟ್ಟದು; ಅದು ಎಂಥವರನ್ನಾದರೂ ಮೋಹದಲ್ಲಿ ಕೆಡಹುವದು. ಅದರಲ್ಲಿ ಸ್ತ್ರೀಯು ವಿಪತ್ತಿಗೆ ಗುರಿಯಾ ಗಿದ್ದರಂತೂ ಆಕೆಯ ಆಪನ್ನಿವಾರಣಕ್ಕೆ ಪುರುಷನ ಆತುರತೆಯು ಹೆಚ್ಚು ವದು. ಆ ಸ್ತ್ರೀಗೂ ತನಗೂ ಏನೂ ಸಂಬಂಧವಿರದಿದ್ದರೂ ಅವಳಿಂದ ತನಗೇನೂ ಪ್ರಯೋಜನವಿಲ್ಲದಿದ್ದರೂ ಅವಳಿಗೆ ಶಕ್ತಿಮೀರಿ ಸಹಾಯ ಮಾಡಿ ಅವಳ ಮೇಲೆ ಉಪಕಾರದ ಹೊರೆಯನ್ನು ಹೊರಿಸಬೇಕೆಂಬ ಇಚ್ಛೆಯು ಎಷ್ಟೋ ಜನ ಪುರುಷರಿಗಿರುತ್ತದೆ. ಇದಕ್ಕೆ ಮೋಹ ವೆನ್ನಬಹುದು; ಇಲ್ಲವೆ ಸ್ತ್ರೀಯಲ್ಲಿದ್ದ ಆಕರ್ಷಣಶಕ್ತಿಯೆಂದೆನ್ನ ಬಹುದು, ಅಥವಾ ಅಬಲೆಯೆನಿಸಿದ ಸ್ತ್ರೀಗೆ ಸಹಾಯ ಮಾಡುವ ಪುರುಷಧರ್ಮವೆನ್ನಬಹುದು; ಏನೇ ಇರಲಿ. ಇಂಥವರಲ್ಲಿ ಸ್ಥೂಣಾ ಕರ್ಣನು ಒಬ್ಬನಾಗಿದ್ದನು. ಅವನು ಆ ಸ್ತ್ರೀಯ ಧ್ಯಾನವಿಸರ್ಜನೆ

...ಗೆ ಅಲ್ಲಿಯೇ ಕುಳಿತನು. ಮುಂದೆ ಕಾಸೆರಡುಕಾಸು ...ಪಸ್ವಿನಿಯು ಧ್ಯಾನ ವಿಸರ್ಜನೆಮಾಡಿ ಕಣ್ಣು ತೆರೆದಳು. ಒಬ್ಬ ಪುರುಷನು ತನ್ನನ್ನೇ ಲಕ್ಷಿಸುತ್ತ ಕುಳಿತಿದ್ದನು. ... ಅವಳು ಅಂಜಿದರೂ ಆ ಕಡೆಗೆ ದುರ್ಲಕ್ಷಿಸಿ ಮೌನದಿಂದ ...ತಿದ್ದಳು.

ತಪಸ್ವಿನಿಯು ಮಾತಾಡದಿರಲು, ಸ್ಥೂಣಾಕರ್ಣನು ಅಚ್ಚರಿ...ಡು ತಾನೇ ಆಕೆಯನ್ನು ಕುರಿತು:—ತಪಸ್ವಿನೀ, ನೀನಾರು? ...ದು ಯಕ್ಷಾಧಿಪನಾದ ಕುಬೇರನ ಉಪವನವಾಗಿದ್ದು, ಇಲ್ಲಿ ನಿನ್ನ ಪ್ರವೇಶವು ಹ್ಯಾಗಾಯಿತು? ನೀನು ಯಾವ ಉದ್ದೇಶದಿಂದ ಇಲ್ಲಿ ತಪಸ್ಸನ್ನು ಮಾಡುತ್ತಿರುವಿ? ಎಂದು ಪ್ರಶ್ನಮಾಲಿಕೆಯನ್ನೇ ಅವಳ ಕೊರಳಲ್ಲಿ ಹಾಕಿದನು. ಒಮ್ಮೆಲೆ ಮಾಡಿದ ಇಷ್ಟು ಪ್ರಶ್ನೆಗಳಿಗೆ ಏನು ಉತ್ತರ ಕೊಡಬೇಕೆಂಬದು ಆ ಶಿಖಂಡಿಗೆ ತಿಳಿಯದಾಯಿತು. ಆದರೂ ಅವಳು ಬಹಳ ಹೊತ್ತಿನವರೆಗೆ ಯೋಚಿಸಿ ನುಡಿದಳೇನಂದರೆ:—“ನಾನೋರ್ವ ರಾಜಪುತ್ರಿಯು; ಮಹತ್ತರವಾದ ಸಂಕಟದಿಂದ ತ್ರಸ್ತಳಾಗಿ ಶಂಕರನನ್ನು ಕುರಿತು ತಪಸ್ಸನ್ನು ಮಾಡುತ್ತಿರುವೆನು.”

ಸ್ತ್ರೀಯು ಸಂಕಟಗ್ರಸ್ತಳಾಗಿರುವಳೆಂಬ ತನ್ನ ತರ್ಕವು ನಿಜವಾಗಲು, ಸ್ಥೂಣಾಕರ್ಣನು ಸಮಾಧಾನಪಟ್ಟು ಆಕೆಯನ್ನು ಕುರಿತು ನುಡಿದನೇನಂದರೆ:—ರಾಜಪುತ್ರೀ, ನೀನು ಯಾರೇ ಇರಲಿ; ನಿನ್ನ ಮುಖವನ್ನು ನೋಡಿದಕೂಡಲೆ ನಿನಗೆ ಉಪಕಾರ ಮಾಡಬೇಕೆಂಬ ಬುದ್ಧಿಯು ನನ್ನಲ್ಲಿ ಉಂಟಾಗಿರುತ್ತದೆ; ನಾನು ಕುಬೇರನ ಮುಖ್ಯ ಸೇವಕನಿರುತ್ತೇನೆ. ನನಗೆ ಸ್ಥೂಣಾಕರ್ಣನೆನ್ನುವರು. ನೀನಾರೆಂಬದನ್ನೂ, ನಿನಗೆ ಬಂದ ಸಂಕಟವನ್ನೂ ನನ್ನ ಮುಂದೆ ಹೇಳಿದರೆ, ನಿನಗೆ ನನ್ನಿಂದ ಏನಾದರೂ ಸಹಾಯವಾದೀತು, ಎಂದು ನುಡಿದನು. ಶಿಖಂಡಿಯು ಸ್ಥೂಣಾಕರ್ಣನ ಮಾತುಗಳನ್ನು ಕೇಳಿ ಉತ್ತರೇಚ್ಛೆಯು ಹೇಗಿ

ರುವದೋ ನೋಡಬೇಕೆಂದು ತನ್ನ ನಿಜವಾದ ವೃತ್ತಾಂತವನ್ನು ಅವನ ಮುಂದೆ ಹೇಳಿದಳು.

ಸ್ಥೂಣಾಕರ್ಣನು ನಿಜವಾಗಿಯೂ ಹೆಣ್ಣುಗರಳಿನವನಾಗಿದ್ದನು. ಶಿಖಂಡಿಯ ಸಂಕಟವು ತನ್ನ ಯೋಗ್ಯತೆಯನ್ನು ಮೀರಿದ್ದರೂ ಆಕೆಗೆ ಸಹಾಯ ಮಾಡಬೇಕೆಂಬ ಉತ್ಕಟೇಚ್ಛೆಯು ಅವನಲ್ಲಿ ಹುಟ್ಟಿತು. ಯಕ್ಷನಾದ ಸ್ಥೂಣಾಕರ್ಣನಲ್ಲಿ ಮನುಷ್ಯಳಾದ ಶಿಖಂಡಿಯ ವಿಷಯವಾಗಿ ದಯೆಹುಟ್ಟಿದ್ದು, ಈಶಪ್ರಸಾದದ ಪ್ರಭಾವವೇ ಎಂದು ತೋರಿತು. ಹಾಗಲ್ಲದಿದ್ದರೆ ಸ್ಥೂಣಾಕರ್ಣನು ತನ್ನ ಅಧಿಕಾರದ್ದಲ್ಲದ ಈ ಕೆಲಸದಲ್ಲಿ ಎಂದೂ ಕೈಹಾಕುತ್ತಿರಲಿಲ್ಲ.

ಯಕ್ಷರಿಗೆ ಅನ್ಯರ ರೂಪವನ್ನು ತಕ್ಕೊಂಡು ತಮ್ಮ ರೂಪವನ್ನು ಅವರಿಗೆ ಕೊಡಲಿಕ್ಕೆ ಬರುತ್ತದೆ; ಆದ್ದರಿಂದ ಸ್ಥೂಣಾಕರ್ಣನು ಶಿಖಂಡಿಯ ಸ್ತ್ರೀರೂಪವನ್ನು ತಾನು ಸ್ವೀಕರಿಸಿ ಶಿಖಂಡಿಗೆ ತನ್ನ ಪುರುಷರೂಪವನ್ನು ಕೆಲದಿನದ ಮಟ್ಟಿಗೆ ಕೊಡಬೇಕೆಂದು ಮಾಡಿದನು. ಕಾಂಚನವರ್ಮನು ಬಂದು ಅಳಿಯನನ್ನು ಪರೀಕ್ಷೆಮಾಡಿ ಹೋಗುವವರೆಗೆ ಶಿಖಂಡಿಗೆ ಪುರುಷದೇಹವು ಬೇಕಾಗಿತ್ತು. ಅಷ್ಟರಮಟ್ಟಿಗೆ ಸ್ತ್ರೀರೂಪ ತಕ್ಕೊಂಡು ಪುರುಷರೂಪವನ್ನು ಕೊಡುವದಕ್ಕೆ ಸ್ಥೂಣಾಕರ್ಣನು ಆನಂದದಿಂದ ಒಪ್ಪಿಕೊಂಡನು; ಶಿಖಂಡಿಯು ದಿವ್ಯ ಪುರುಷಹದೇಹವನ್ನು ತಾಳಿದನು. ಸ್ಥೂಣಾಕರ್ಣನು ಸ್ತ್ರೀಯಾಗಿ ತನ್ನ ಶಿಬಿರವನ್ನು ಸೇರಿದನು.

---

## [ ೫ ]

• • •

ದ್ರುಪದರಾಜನು ಶಿಖಂಡಿಯು ಒಮ್ಮೆಂದೊಮ್ಮೆ ಅರಮನೆಯಲ್ಲಿಂದ ಇಲ್ಲದಂತಾದದ್ದನ್ನು ತಿಳಿದು ಬಹಳ ಗೊಂದಲದಲ್ಲಿ ಬಿದ್ದನು. ಈ ವಿಚಾರದಲ್ಲಿ ಅವನಿಗೆ ಅಗ್ನಿಕಾಷ್ಠವನ್ನು ಭಕ್ಷಿಸುವದಕ್ಕೆ ಅವಕಾಶವಾಗಲಿಲ್ಲ. ಅಷ್ಟರಲ್ಲಿ ಒಂದುದಿನ ಮೂರುಸಂಜೆಯ ಮುಂದೆ ಶಿಖಂಡಿಯು ರಾಜಮಂದಿರಕ್ಕೆ ಬಂದನು. ಅತನ ದಿವ್ಯದೇಹವನ್ನು ನೋಡಿ ದ್ರುಪದರಾಜನಿಗೆ ಆಶ್ಚರ್ಯವಾಯಿತು. ಆಗ ಶಿಖಂಡಿಯು ತಂದೆಯನ್ನು ಬಹಳ ಹೊತ್ತಿನವರೆಗೆ ಆಶ್ಚರ್ಯದಲ್ಲಿ ಮುಣಗಿಸದೆ, ತಾನು ಮನೆಬಿಟ್ಟು ಹೋದಬಳಿಕ ನಡೆದ ಸಂಗತಿಗಳನ್ನು ಸಾದ್ಯಂತವಾಗಿ ವಿವರಿಸಿದನು.

ಶಿಖಂಡಿಯು ಈಶಪ್ರಸಾದದಂತೆ ಪುರುಷನಾಗಿ ಬಂದನೆಂಬು ದ್ರುಪದನಿಗೆ ಹೇಳಕೂಡದಷ್ಟು ಆನಂದವಾಯಿತು. ಯಾವ ಶಿಖಂಡಿಯು ಸ್ತ್ರೀರೂಪದಿಂದ ತನ್ನ ಮೇಲೆ ಹಾಗು ತನ್ನ ರಾಜ್ಯದ ಮೇಲೆ ಭಯಂಕರವಿಪತ್ತು ಪ್ರಾಪ್ತವಾಗಬಹುದಾಗಿತ್ತೋ, ಅದು ಶಿಖಂಡಿಯು ಪುರುಷರೂಪದಿಂದ ದೂರಾಯಿತೆಂದು ಅತನು ಸಂತಸಪಟ್ಟದ್ದರಲ್ಲಿ ಆಶ್ಚರ್ಯವೇನು! ಕೆಲದಿನವಷ್ಟೇ ಆಗಲೊಲ್ಲದೇಕೆ, ಶಿಖಂಡಿಯು ಪುರುಷತ್ವವನ್ನು ಪಡೆದದ್ದರಿಂದ ತನ್ನ ಅವಮಾನವು ಬೇರೊರಿಸಿ ಕಿತ್ತು ಹೋಯಿತೆಂದು ಆ ಮಾನೀ ದ್ರುಪದನು ತಿಳಿದನು. ಈ ಸಂಗತಿಯನ್ನು ಮಹಾರಾಜ್ಞಿಯ ಮುಂದೆ ಯಾವಾಗ ಹೇಳೇನೆಂಬ ಕುತೂಹಲವು ಅವನಲ್ಲುಂಟಾಯಿತು. ಕೂಡಲೆ ಅವನು ಅಂತಃಪುರಕ್ಕೆ ಹೋಗಿ ಈಶಪ್ರಸಾದವು ಸತ್ಯವಾದ ಆ ಆನಂದಕರ ಸುದ್ದಿಯನ್ನು ರಾಜ್ಞಿಗೆ ತಿಳಿಸಿದನು. ಆ ರಾಜಮಹಿಷಿಯಾದರೂ ತುಂಬಾ ಆನಂದಪಟ್ಟು ಮಗ

ನನ್ನು ಪುದ್ಘಾಡಿದಳು: ಅಂದು ಆ ರಾಜಮಂದಿದರಲ್ಲೆಲ್ಲ ಆನಂದವೇ ಆನಂದವು!

ಯಾವ ಕೊರತೆಯಿಂದ ಶಿಖಂಡಿಯು ಇದುವರೆಗೆ ಹೆಂಡತಿಯ ಮಂದಿರಕ್ಕೆ ಹೋಗಿದ್ದಿಲ್ಲವೋ ಆ ಕೊರತೆಯು ದೂರವಾದ ಬಳಿಕ ಕೇಳುವದೇನು? ಹೆಂಡತಿಯ ಬಳಿಗೆ ಹೋಗಿ ಆಕೆಯ ಸಮಾಚಾರ ವನ್ನು ತಕ್ಕೊಳ್ಳಬೇಕೆಂಬ ಆತುರತೆಯು ಅವನಲ್ಲಿ ಹೆಚ್ಚಿತು. ಅವನು ಅಂದಿನ ರಾತ್ರಿಯಲ್ಲಿಯೇ ಹೆಂಡತಿಯಿರುವ ಮಂದಿರವನ್ನು ಹೊಕ್ಕನು. ಆ ಲಾವಣ್ಯವತಿಯು ಗಲ್ಲಕ್ಕೆ ಕೈಹಚ್ಚಿಕೊಂಡು ವಿರಹಚಿಂತಾತುರ ಳಾಗಿ ಕುಳಿತುಕೊಂಡಿದ್ದಳು. ಬಳಿಯಲ್ಲಿ ಅನೇಕ ಜನ ದಾಸಿಯರು ಕುಳಿತು ವಿನೋದದ ಮಾತು-ಕಥೆಗಳನ್ನಾಡುತ್ತಿದ್ದರು. ಅವರ ಮಾತಿನ ಕಡೆಗೆ ಆಕೆಯ ಲಕ್ಷ್ಯವೇ ಇರಲಿಲ್ಲ. ದುಃಖಪೀಡಿತ ರನ್ನು ಅದರಲ್ಲೂ ವಿರಹದುಃಖಪೀಡಿತರನ್ನು ಯಾವ ವಿನೋದಗಳೂ ರಮಿಸಲು ಸಮರ್ಥವಾಗುವದಿಲ್ಲ. ಹೀಗೆ ಅಕಸ್ಮಾತ್ತಾಗಿ ರಾಜ ಕುವರನು ಮಂದಿರವನ್ನು ಪ್ರವೇಶಿಸಲು ಚಿಂತಾಮಗ್ನಳಾದ ಆ ಲಾವಣ್ಯವತಿಯು ಅಚ್ಚರಿಗೊಂಡು ಎದ್ದು ನಿಂತಳು. ದಾಸಿಯರು ಲಜ್ಜಿತರಾಗಿ ಅಲ್ಲಿಂದ ಕಾಲ್ದೆಗೆದರು.

ಶಿಖಂಡಿಯು ಅಲ್ಲಿದ್ದ ರತ್ನಖಚಿತ ಮಂಚದ ಮೇಲೆ ಕುಳಿತು ಆಶ್ಚರ್ಯಭರದಿಂದ ಬಳುಕುತ್ತಿದ್ದ ಹೆಂಡತಿಯ ಕೈಹಿಡಿದು ಬಳಿಯಲ್ಲಿ ಎಳೆದುಕೊಂಡನು. ತನ್ನ ಗಂಡನು ಸ್ತ್ರೀಪ್ರಕೃತಿಯವನೆಂದು ಆ- ಕಾಂಡ-ತಾಂಡವವನ್ನೆಬ್ಬಿಸಿದ ಆಕೆಗೆ ಈಗ ಗಂಡನ ಕರಸ್ಪರ್ಶದಿಂದ ಸಿಡಿಲುಬಡಿದಂತಾಯಿತು. ದಾಸಿಯ ಮಾತಿನ ಮಬ್ಬಿಗೆ ಬಿದ್ದು ನಾನು ಯಾರನ್ನು ನೋಡಿ ಈ ಅನಾಹುತಕ್ಕೆ ಗುರಿಯಾದೆನೋ ಎಂದು ಅವಳು ಭಯಗ್ರಸ್ತಳಾದಳು. ಗಂಡನ ಆಗಮನದಿಂದ ಸಂತೋಷ ವಾಗುವದರ ಬದಲು ಆ ಸತಿಗೆ ತಾನು ಮಾಡಿದ ಕೃತಿಗಾಗಿ ಅತ್ಯಂತ

ದುಃಖವಾಯಿತು. ಶಿಖಂಡಿಯು ಆಕೆಯ ಭಯಗ್ರಸ್ತ ಸ್ಥಿತಿಯನ್ನು ತಿಳಿದು ಅವಳೊಡನೆ ಯಾವ ಹರ್ಚೆಯನ್ನೂ ಮಾಡದೆ ಪ್ರಿಯೇ, ಹೀಗೇಕೆ ನಡುಗುತ್ತಿರುವೆ? ಇಷ್ಟು ದಿನ ಅನೇಕ ಕಾರ್ಯಬಾಹುಳ್ಯದ ಮೂಲಕ ನಿನ್ನೆಡೆಗೆ ಬರಲಿಲ್ಲ. ಕ್ಷಮಿಸು ಎಂದು ನುಡಿದು ಅವಳ ಆಲಿಂಗನಸುಖದಲ್ಲಿ ಮಗ್ನನಾದನು.

ಮಗನು ಪುಂಸ್ತ್ವವನ್ನು ಹೊಂದಿ ಬಂದದ್ದರಿಂದ ಆನಂದ ಪುಳಕಾಂಕಿತನಾದ ದ್ರುಪದನು ಧೈರ್ಯಗೊಂಡು ಕಾಂಚನವರ್ಮನಿಗೆ ಒಂದು ಪತ್ರಬರೆದು ದೂತನೊಡನೆ ಕಳುಹಿ ಆತನ ಆಗಮನವನ್ನಿರೀಕ್ಷಿಸಹತ್ತಿದನು. ಇತ್ತ ದೂತನು ವೇಗವಾಗಿ ಮಾರ್ಗಕ್ರಮಿಸಿ ಕಾಂಚನವರ್ಮನ ರಾಜಧಾನಿಯನ್ನು ಮುಟ್ಟಿದನು. ಆತನು ದ್ರುಪದನ ಉತ್ತರದ ನಿರೀಕ್ಷಣೆಯನ್ನೇ ಮಾಡುತ್ತಿದ್ದದರಿಂದ ಅತ್ಯಂತ ಆತುರತೆಯಿಂದ ದೂತನು ಕೊಟ್ಟ ಪತ್ರವನ್ನು ಓದತೊಡಗಿದನು. ಆ ಪತ್ರದಲ್ಲಿ ಹೀಗೆ ಬರೆದಿತ್ತು. "ನಿಮ್ಮ ಪತ್ರವನ್ನೋದಿ ಸಂತೋಷವೂ ಖೇದವೂ ಆಯಿತು. ನಿಮ್ಮಂತೆ ಅವಿವೇಕತನವನ್ನು ತಂದುಕೊಂಡು ಸಿಟ್ಟಿನ ಕೈಯಲ್ಲಿ ಬುದ್ಧಿಕೊಟ್ಟರೆ ಮಹಾ ಅನರ್ಥವಾಗುವದೆಂದು ತಿಳಿದು ಸೌಮ್ಯಶಬ್ದಗಳಿಂದ ನಿಮ್ಮನ್ನು ಎಚ್ಚರಗೊಳಿಸಿದ್ದೇನೆ. ನೀವು ಬರೆದ ಸಂಗತಿಯು ವಿಷಯವಾಗಿ ನಮಗೆ ನಗೆ ಬಂದಿತು. ನಿಮ್ಮ ಸಮಾನ ಹುಚ್ಚರು ಲೋಕದಲ್ಲಿ ಇನ್ನಾರೂ ಇರಲಿಕ್ಕಿಲ್ಲವೆಂದು ಕಂಡು ಬಂದಿತು. ನಿಮಗೆ ಇಚ್ಛೆಯಿದ್ದರೆ ವಸ್ತುಸ್ಥಿತಿಯನ್ನು ಪ್ರತ್ಯಕ್ಷವಾಗಿ ಕಂಡು ನಂಬಿಗೆಯನ್ನುಂಟು ಮಾಡಿಕೊಳ್ಳಬಹುದು."

ಪತ್ರವನ್ನೋದಿ ಕಾಂಚನವರ್ಮನು ಬೆಪ್ಪನಾದನು. ಪ್ರತ್ಯಕ್ಷ ಮಗಳ ಪತ್ರವು ಮಿಥ್ಯವೋ ಅಥವಾ ಬೀಗನ ಪತ್ರವು ಮಿಥ್ಯವೋ ಎಂಬದು ಅವನಿಗೆ ತಿಳಿಯದಾಯಿತು. ಆದರೂ ದ್ರುಪದರಾಜನ ಪತ್ರದಲ್ಲಿರುವ ಗಾಂಭೀರ್ಯವನ್ನು ತಿಳಿದು ಮಗಳ ಪತ್ರದ ಸಂಗತಿಯಲ್ಲಿ

ಆಪನಂಬಿಕೆಯನ್ನು ತಾಳಿದನು. ಆಗ ಆತನಿಗೆ ತನ್ನ ಮಗಳ ವಿಷಯ ವಾಗಿ ಸ್ವಲ್ಪ ಸಿಟ್ಟು ಬಂದಿತು. ಪ್ರಸಂಗವು ಮಿಂಚಿಹೋದದ್ದರಿಂದ ಆದ ಮಾತಿಗೆ ಚಿಂತಿಸುತ್ತ ಕೂಡದೆ ಒಮ್ಮೆ ದ್ರುಪದನಗರಿಗೆ ಹೋಗಿ ಪ್ರಾಂಜಲಮನಸ್ಸಿನಿಂದ ಅವನ ಕ್ಷಮೆಯನ್ನು ಯಾಚಿಸಬೇಕೆಂದು ನಿರ್ಧರಿಸಿದನು. ತಾನು ದ್ರುಪದನ ಮನೆಗೆ ಕನ್ಯೆಯನ್ನು ಕೊಟ್ಟವ ನಾದ್ದರಿಂದ ಅವನ ವಿಷಯವಾಗಿ ಸೋತು ನಡೆಯಬೇಕೆಂದು ಗೊತ್ತು ಮಾಡಿದನು.

ಬೀಗನು ಬರುವನೆಂಬದು ದ್ರುಪದರಾಜನಿಗೆ ನಂಬಿಕೆಯಿತ್ತು. ಆದ್ದರಿಂದ ಅವನು ಬೀಗನ ಆತಿಥ್ಯಕ್ಕಾಗಿ ಒಳ್ಳೇ ಸೌರಣೆಯನ್ನು ನಡಿ ಸಿದ್ದನು. ಅಷ್ಟರಲ್ಲಿ ದಾಶಾರ್ಣಾಧಿಪತಿಯು ಬಂದನೆಂಬ ಸುದ್ದಿ ಯನ್ನು ಗಡಿರಕ್ಷಕರು ತಂದರು. ದ್ರುಪದನು ಸೇನಾಪರಿವ್ರತನಾಗಿ ಕಾಂಚನವರ್ಮನಿಗಭಿಮುಖನಾಗಿ ಹೊರಟು ಮಾರ್ಗದಲ್ಲಿ ಸೇನಾ ಸಮೇತನಾದ ಆತನನ್ನು ಕಂಡುಕೊಂಡನು. ದ್ರುಪದನ ಈ ಲೋಕೋ ತ್ತರ ವಿನಯಕ್ಕಾಗಿ ಕಾಂಚನವರ್ಮನು ತೀರಾ ಹೈರಾಣಾಗಿ ನಿರ್ಮ ಲ ಮನಸ್ಸಿನಿಂದ ದ್ರುಪದನ ಕ್ಷಮೆಯನ್ನು ಯಾಚಿಸಿದನು. ದೊಡ್ಡ ಮನಸ್ಸಿನ ಹಾಗು ದೇವಭಕ್ತನಾದ ದ್ರುಪದನು ಅವನನ್ನು ಅತಿ ವಿಜೃಂಭಣೆಯಿಂದ ರಾಜಧಾನಿಗೆ ಕರೆದೊಯ್ದನು.

ಕಾಂಚನವರ್ಮನು ತನ್ನ ಸಂಗಡ ಗುಪ್ತವಾಗಿ ರಾಜವೈದ್ಯರ ನ್ನೂ ಲಕ್ಷಣಜ್ಞರನ್ನೂ ಕರೆತಂದಿದ್ದನು. ಶಿಖಂಡಿಯು ಯುವರಾಜನಿಗೆ ಒಪ್ಪುಬಹುದಾದ ಬೆಲೆಯುಳ್ಳ ಪೋಷಾಕನ್ನು ಧರಿಸಿ ನೆರೆದ ದರ್ಬಾರ ದಲ್ಲಿ ಮಾವನಿಗೆ ಭೆಟ್ಟಿಯಾದನು. ರಾಜಲಕ್ಷಣಯುಕ್ತನೂ ಭವ್ಯ ಶರೀರವುಳ್ಳವನೂ ಆದ ಅಳಿಯನನ್ನು ನೋಡಿ ಕಾಂಚನವರ್ಮನಿಗೆ ಬಹಳ ಪಶ್ಚಾತ್ತಾಪವಾಯಿತು. ಆದರೆ ಒಬ್ಬರೂ ಬಾಯಿ ಬಿಚ್ಚಿ ಮಾತಾಡುವ ಹಾಗಿಲ್ಲ; ಕಾಂಚನವರ್ಮನ ರಾಜವೈದ್ಯರೂ, ಲಕ್ಷ

ಣಾಜ್ಞರೂ ತಮಗೆ ಯುಕ್ತಕಂಡ ಮಾರ್ಗಗಳಿಂದ ಶಿಖಂಡಿಯನ್ನು ಪರೀಕ್ಷಿಸಿ ತಮ್ಮ ಒಡೆಯನ ಶಂಕೆಯನ್ನು ನಿರಸನಮಾಡಿದರು. ಶಿಖಂಡಿಯು ಸ್ತ್ರೀಯಾಗಿರದೆ ನಿಜವಾದ ಪುರುಷನಿರುವನೆಂಬದು ಕಾಂಚನವರ್ಮನಿಗೆ ಗೊತ್ತಾಗಿ ಹೋಯಿತು.

ಅಳಿಯನನ್ನು ನೋಡಿ ಕಾಂಚನವರ್ಮನಿಗೆ ಸಮಾಧಾನವಾಯಿತು ಆದರೆ ಮಗಳ ಸೌಖ್ಯದ ವಿಷಯವಾಗಿ ಅವನಲ್ಲಿ ಕಿಂಚಿತ್ ಅಸಮಾಧಾನವು ನೆಲೆಗೊಂಡಿತ್ತು. ಒಮ್ಮೊಮ್ಮೆ ಮಗಳು ಸುಳ್ಳುಸುದ್ದಿಯನ್ನು ಹಟ್ಟಿಸಿ ತನ್ನ ಮಾನಹಾನಿ ಮಾಡಿದಳೆಂದು ಅವನಿಗೆ ಸಿಟ್ಟು ಬರುತ್ತಿತ್ತು; ಆದರೆ ಮಗಳಿಂದಲೇ ತನಗೆ ಈ ಕೆಟ್ಟ ಸುದ್ದಿಯು ಹತ್ತಿತೆಂಬದನ್ನು ಆಡಿತೋರಿಸಿದರೆ, ನಿಶ್ಚಯವಾಗಿ ಮಗಳ ಸಂಸಾರವು ತಪ್ಪಿಹೋಗುವದೆಂದು ಭಯಗೊಂಡು ಆ ಧೂರ್ತ ಕಾಂಚನವರ್ಮನು ತನಗೆ ಹತ್ತಿದ ಸುದ್ದಿಯ ಉಸಾಬರಿಯನ್ನು ತೆಗೆಯಲೇ ಇಲ್ಲ; ಮಗಳ ಮೂರ್ಖತನವನ್ನು ಬೈಲಿಗೆಳೆಯುವ ಸಾಹಸಕ್ಕೂ ಹೋಗಲಿಲ್ಲ. ನಾಲ್ಕುದಿನ ದ್ರುಪದನ ರಾಜಧಾನಿಯಲ್ಲಿದ್ದು, ಆತನ ರಾಜ್ಯದ ಸ್ಥಿತಿಯನ್ನೂ, ಪ್ರಜಾನುರಾಗವನ್ನೂ, ಪಾಪಭೀರುತೆಯನ್ನೂ ತಿಳಿದು ಸಂತೋಷಪಟ್ಟು ಒಂದು ದಿನ ಮಗಳ ಭೆಟ್ಟಿಗೋಸ್ಕರ ಅಂತಃಪುರಕ್ಕೆ ಹೋದನು. ಈ ಅವಧಿಯಲ್ಲಿ ಆ ಲಾವಣ್ಯವತಿಯು ಪತಿಪ್ರೇಮಕ್ಕೆ ಪಾತ್ರಳಾದ್ದರಿಂದ ತಂದೆಗೆ ಮುಖ ತೋರಿಸುವದಕ್ಕೆ ಅವಳು ಬಹಳವಾಗಿ ಸಂಕೋಚಪಟ್ಟಳು; ಆದರೆ ಆತನು ತಾನಾಗಿಯೇ ಅಂತಃಪುರಕ್ಕೆ ಬಂದಬಳಿಕ ಆ ಸುಂದರಿಯು ತಂದೆಯನ್ನು ನಮಸ್ಕರಿಸಿ ಬಂಧುಗಳ ಯೋಗಕ್ಷೇಮವನ್ನು ತಿಳಿದುಕೊಂಡಳು. ಮಗಳ ಉಲ್ಹಾಸ, ಪ್ರಫುಲ್ಲಿತವಾದ ಮುಖಭಾವ ಮೊದಲಾದವುಗಳನ್ನು ತಿಳಿದು ಕಾಂಚನವರ್ಮನು ಮಗಳು ಪತಿಪ್ರೇಮಕ್ಕೆ ಪಾತ್ರಳಾಗಿರುವಳೆಂಬ ಲಕ್ಷಣವನ್ನು ತಿಳಿದುಕೊಂಡು ಪತ್ರದ ಸುದ್ದಿ

ಯನ್ನೆತ್ತದೆ ಪುತ್ರಿಯ ಮುಖವನ್ನು ನೋಡನೋಡುತ್ತ ಅಲ್ಲಿಂದ ಹೊರಹೊರಟನು.

ಬಳಿಕ ಕಾಂಚನವರ್ಮನು ದ್ರುಪದನಗರಿಯಲ್ಲಿ ಬಹಳ ದಿವಸ ಇರಲಿಲ್ಲ. ಬೀಗನ ನಿರೂಪವನ್ನು ತೆಗೆದುಕೊಂಡು ಅಳಿಯನನ್ನು ಅಂತಃಕರಣಪೂರ್ವಕವಾಗಿ ಆಶೀರ್ವದಿಸಿ ಪರಿವಾರ ಸಮೇತನಾಗಿ ತನ್ನ ರಾಜಧಾನಿಗೆ ಪ್ರಯಾಣ ಬೆಳೆಸಿದನು. ಕಾಂಚನವರ್ಮನನ್ನು ಕಳಿಸಿಬಂದ ದ್ರುಪದನು ಉಸ್ಸೆಂದು ಅಂತಃಪುರದಲ್ಲಿ ಮಂಚದ ಮೇಲೆ ಕುಳಿತು ಒಂದು ಕುತ್ತದಿಂದ ಪಾರಾದೆನೆಂದು ನುಡಿದನು. ಅಗ್ನಿಕಾಷ್ಠಭಕ್ಷಣ ಮಾಡುವಂಥ ಪ್ರಸಂಗವು ತಪ್ಪಿ ಈ ರೀತಿ ಸರ್ವತ್ರದಲ್ಲಿಯು ಆನಂದವುಂಟಾದದ್ದನ್ನು ತಿಳಿದು ದ್ರುಪದನಿಗೆ ಹೇಳಕೂಡದಷ್ಟು ಸಂತೋಷವಾಯಿತು. ಈಶಪ್ರಸಾದದ ನಿಜವಾದ ಸೌಖ್ಯವನ್ನು ಇಂದು ಅನುಭವಿಸಿದೆವೆಂಬ ಧನ್ಯೋದ್ಗಾರಗಳು ಆ ರಾಜದಂಪತಿಗಳ ವಾಣಿಯಿಂದ ಸಹಜವಾಗಿ ಹೊರಬಿದ್ದವು.

---

## [ ೬ ]

...

ಇತ್ತ ಸ್ಥೂಣಾಕರ್ಣನು ಶಿಖಂಡಿಗೆ ತನ್ನ ಪುರುಷರೂಪವನ್ನು ಕೊಟ್ಟ ಬಳಿಕ ಶಿಖಂಡಿಯು ಸ್ತ್ರೀರೂಪವನ್ನು ಧರಿಸಿ ಶಿಬಿರವನ್ನು ಸೇರಿದನೆಂದು ಹಿಂದೆ ಹೇಳಿದೆಯಷ್ಟೇ; ಕಾಂಚನವರ್ಮನು ಬಂದು ವರಪರೀಕ್ಷೆ ಮಾಡಿಕೊಂಡು ಹೋದಬಳಿಕ ಶಿಖಂಡಿಯು ಸ್ಥೂಣಾಕರ್ಣನ ಬಳಿಗೆ ಬಂದು ಅವನಿಗೆ ಅವನ ಪುಂಸ್ತ್ವವನ್ನು ತಿರುಗಿ ಕೊಟ್ಟು ತನ್ನ ಸ್ತ್ರೀರೂಪವನ್ನು ಸ್ವೀಕರಿಸಬೇಕೆಂದು ಅವರಿಬ್ಬ

ರಲ್ಲಿ ಕರಾರುಗಳು ಆಗಿದ್ದವು. ಶಿಖಂಡಿಯು ತಿರುಗಿ ಬರುವದ ಕ್ಕಿನ್ನೂ ಅವಕಾಶವಿತ್ತು; ಅಷ್ಟರಲ್ಲಿ ಕಾಲ-ಕರ್ಮಗಳ ಸಂಯೋ ದಿಂದ ಯಕ್ಷಪತಿಯಾದ ಕುಬೇರನು ತನ್ನ ಸೇವಕರು ಸರ್ವಕಡೆಗೂ ಜಾಗರೂಕರಾಗಿರುವರೋ ಇಲ್ಲವೋ ಎಂಬದನ್ನು ನೋಡುವಕ್ಕೆ ಹೊರಟನು. ಅವನು ಮೊದಲು ಮುಖ್ಯ ಸೇವಕನಾದ ಸ್ಥೂಣಾ ಕರ್ಣನ ಬಳಿಗೆ ಬಂದನು, ಉದ್ಯಾನದ ವ್ಯವಸ್ಥೆಯು ಚನ್ನಾಗಿತ್ತು. ವೃಕ್ಷಗಳು ಫಲಭಾರದಿಂದ ಜಗ್ಗುತ್ತಿದ್ದವು. ಹೂವಿನ ಗಿಡಗಳಂತೂ ಸೊಗಸನ್ನು ಬೀರುತ್ತಿದ್ದವು. ವೃಕ್ಷಗಳಾಗಲಿ, ಬಳ್ಳಿಗಳಾಗಲಿ, ಗಿಡ ಗಳಾಗಲಿ ಮುಕ್ಕು ಬಿದ್ದಿರಲಿಲ್ಲ; ಎಲ್ಲವೂ ಪ್ರಫುಲ್ಲಿತವಾಗಿ ಒಪ್ಪುತ್ತಿ ದ್ದವು; ವನಶ್ರೀಯನ್ನು ನೋಡಿ ಸಂತೋಷಬಟ್ಟ ಕುಬೇರನು ಸ್ಥೂಣಾ ಕರ್ಣನನ್ನು ಕೊಂಡಾಡುತ್ತ ಅವನ ಶಿಬಿರದ ಬಳಿಗೆ ಬಂದನು. ಕುಬೇ ರನು ಉದ್ಯಾನದಲ್ಲಿ ಕಾಲಿಟ್ಟಾಗಲೇ ಸ್ಥೂಣಾಕರ್ಣನಿಗೆ ಸುದ್ದಿಯು ಹತ್ತಿತು. ಆದರೆ ತಾನು ಸ್ತ್ರೀಯಾಗಿರುವದರಿಂದ ಕುಬೇರನ ಎದುರಿಗೆ ಹೋಗಲು ಅವನು ಭಯಪಟ್ಟು ಆತನನ್ನು ತನ್ನ ಶಿಬಿರಕ್ಕೆ ಕರೆ ತರದೆ ಎಲ್ಲ ಉದ್ಯಾನವನ್ನು ತೋರಿಸಿ ಹೊರಗಿನಿಂದ ಹೊರಗೇ ಕಳಿಸು ವಂತೆ ಮಾಡಿರೆಂದು ಸೇವಕರಿಗೆ ಅಪ್ಪಣೆ ಮಾಡಿದ್ದನು. ಕುಬೇರನು ತನ್ನ ಶಿಬಿರಕ್ಕೆ ಎಲ್ಲಿ ಬರುವನೋ ತನ್ನ ಹೂರಣವು ಎಲ್ಲಿ ಹೊರಬೀಳು ವದೋ ಎಂದು ಅವನು ಕತ್ತಲಕೋಣೆಯಲ್ಲಿಯೇ ಕುಳಿತು ಚಡಪಡಿಸಿ ಚಾಟಿ ಹೊಡೆಯುತ್ತಿದ್ದನು; ಸ್ಥೂಣಾಕರ್ಣನಿಗೊದಗಿದ ದುರವ ಸ್ಥೆಯು ಕುಬೇರನಿಗೆ ಸ್ವಲ್ಪಾದರೂ ಗೊತ್ತಿರಲಿಲ್ಲ.. ಆತನ ಸೇವಕ ರಾರೂ ಈ ಸಂಗತಿಯನ್ನು ಒಡನುಡಿದಿರಲಿಲ್ಲ.

ಕುಬೇನು ಉದ್ಯಾನವನ್ನು ನೋಡಿ ತನ್ನ ಶಿಬಿರಕ್ಕೇ ಬರಲು ಸ್ಥೂಣಾಕರ್ಣನ ಕೈಕಾಲುಗಳೇ ಹೋದವು. ಯಾಕಂದರೆ ಸೇವಕ ವೃತ್ತಿಯು ಬಹುನೀಚವಾದದ್ದು; ಆ ವೃತ್ತಿಯಲ್ಲಿ ಎಷ್ಟು

ಸಂಪತ್ತಿದ್ದರೂ-ಎಷ್ಟು ಅಧಿಕಾರವಿದ್ದರೂ ಪ್ರಸಂಗದಲ್ಲಿ ಅವು ತೃಣವತ್ ಹಾರಿಹೋಗುವವು. ಅವನ ಜೀವಿತವೇ ಅನ್ಯರ ವಶವರ್ತಿಯಾಗಿರುವಾಗ ಅವನ ಅಧಿಕಾರ-ಸಂಪತ್ತಿಗಳ ಬೆಲೆಏನು? ಯಾವನು ಒಬ್ಬರ ಆಳಾಗಿ ದುಡಿಯುವನೋ ಅವನಲ್ಲಿ ಯಾವ ಸ್ವಾತಂತ್ರ್ಯವೂ ಇರುವದಿಲ್ಲ; ಅವನು ಸರ್ವದಾ ತನ್ನ ಒಡೆಯನಿಗೆ ಅಂಜಿ ಅಂಜಿ ನಡೆಯಬೇಕಾಗುತ್ತದೆ. ಅದರಂತೆ ಸ್ಥೂಣಾಕರ್ಣನ ಸ್ಥಿತಿಯೂ ಇತ್ತು. ಅವನು ಎಷ್ಟು ಅಧಿಕಾರವುಳ್ಳವನಾದರೂ ಕುಬೇರನ ಸೇವಕನೆನಿಸಿದ್ದನು ಆದ್ದರಿಂದ ಅವನ ದೇಹದ ಮೇಲೆ ಕುಬೇರನ ಸ್ವಾಮಿತ್ವವು ಪ್ರಸ್ಥಾಪಿತವಾಗಿತ್ತು. ಪ್ರಸಂಗವು ಮೈಮೇಲೆಯೇ ಬರುವಂತೆ ತೋರಿದ್ದಂಥ ಉಪಾಯದಿಂದಲೇ ಪಾರಾಗಬೇಕೆಂದು ಆತನು ಯುಕ್ತಿಸತೊಡಗಿದನು; ತನ್ನ ಸೇವಕರನ್ನು ಕರೆದು ಕುಬೇರನ ಆತಿಥ್ಯವನ್ನು ಬಹಳ ಚನ್ನಾಗಿಡಲು ಆಜ್ಞಾಪಿಸಿದನು. ಸೇವಕರಾದರೂ ಉತ್ತಮ ವ್ಯವಸ್ಥೆಯನ್ನು ಕಾಯ್ದುಕೊಂಡರು. ಆ ಆತಿಥ್ಯದಿಂದ ಕುಬೇರನು ಸಂತೋಷವನ್ನು ಹೊಂದಿದನು. ಆದರೆ ಅವನಿಗೊಂದು ಸಂಗತಿಯು ಒಳ್ಳೇ ಆಶ್ಚರ್ಯಕರವಾಗಿ ತೋರಿತು. ಅದೇನಂದರೆ—ತಾನು ಎಷ್ಟು ಸಾರೆ ಉದ್ಯಾನಕ್ಕೆ ಬಂದರೂ ತನ್ನ ಮುಖ್ಯ ಸೇವಕನಾದ ಸ್ಥೂಣಾಕರ್ಣನು ತನ್ನನ್ನು ಒಂದು ಕ್ಷಣಸಹ ಅಗಲದೆ ಇರುತ್ತಿದ್ದು, ಈ ದಿನ ಅವನ ಶಿಬಿರಕ್ಕೆ ಬಂದರೂ ಸಹ ಅವನ ಭೆಟ್ಟಿ ಇಲ್ಲವಲ್ಲ? ಎಲ್ಲ ಕೆಲಸವನ್ನು ಸೇವಕರೇ ಮಾಡುವರು ಅಂದಬಳಿಕ ಸ್ಥೂಣಾಕರ್ಣನು ಎಲ್ಲಿಗೆ ಹೋಗಿರಬಹುದು?

ಈ ಮೇರೆಗೆ ಕುಬೇರನು ವಿಸ್ಮಯಪಟ್ಟು ಸೇವಕರ ಬಳಿಯಲ್ಲಿ ಸ್ಥೂಣಾಕರ್ಣನ ವಿಷಯವಾಗಿ ಪ್ರಶ್ನೆಯನ್ನು ತೆಗೆದನು. ಮೊದ-ಮೊದಲು ಯಾರಿಂದಲೂ ಸಮರ್ಪಕವಾದ ಉತ್ತರವು ಬಾರದಾಯಿತು. ಸ್ಥೂಣಾಕರ್ಣನು ತನ್ನ ಸ್ಥಿತಿಯನ್ನು ಕುಬೇರನ ಮುಂದೆ ಹೇಳಬೇಡ

ರೆಂದು ಕಟ್ಟಪ್ಪಣೆ ಮಾಡಿದ್ದರಿಂದ ಹಾಗೆ ಮಾಡಲಿಕ್ಕೆ ಅವರು ಅಂಜಿದರು. ಸೇವಕರ ಈ ಹಾರಿಕೆಯ ಉತ್ತರದಿಂದ ನಿಜಸಂಗತಿಯನ್ನು ಕಂಡು ಹಿಡಿಯಲು ಕುಬೇರನಲ್ಲಿ ಹೆಚ್ಚೆಚ್ಚು ಆತುರತೆಯುಂಟಾಗತೊಡಗಿತು. ಕಡೆಗೆ ಅವನು ಸೇವಕನನ್ನು ಗದ್ದರಿಸಿ ಕೇಳಿದನು. ಒಡೆಯನು ಹೀಗೆ ಸಿಟ್ಟಿಗೇಳಲು ಆ ಸೇವಕರು ಗಾಬರಿಯಾದರು. ಅಂಜಂಜುತ್ತ ನಿಜಸಂಗತಿಯನ್ನು ಹೇಳಿದರು.

ಸೇವಕರು ಹೇಳಿದ ಸಂಗತಿಯಿಂದ ಕುಬೇರನು ತಪ್ತನಾದನು. ಯಾವ ಸ್ಥೂಣಾಕರ್ಣನ ಸುವ್ಯವಸ್ಥೆಯ ವಿಷಯವಾಗಿ ಹಾಗು ಅವನ ಅಚ್ಚುಕಟ್ಟುತನದ ವಿಷಯವಾಗಿ ಇದುವರೆಗೆ ಕುಬೇರನಲ್ಲುಂಟಾದ ಸದ್ಭಾವನೆಯು ಕ್ಷಣಮಾತ್ರದಲ್ಲಿ ಅಡಗಿ ಹೋಯಿತು. ಇದುವರೆಗೆ ಆದರಣೀಯನಾದ ಸ್ಥೂಣಾಕರ್ಣನು ಈಗ ಪರಮ ತಿರಸ್ಕರಣೀಯನಾಗಿ ತೋರಿದನು. ತಾನು ಆತನನ್ನು ಉದ್ಯಾನದ ಹಾಗು ರಾಜ್ಯದ ರಕ್ಷಣೆಗಾಗಿ ನೇಮಿಸಿರಲು ಅವನು ತನ್ನ ಕೆಲಸ ಮಾಡದೆ ಮನುಷ್ಯರಿಗೆ ವರಕೊಟ್ಟು ದೊಡ್ಡಸ್ತನವನ್ನು ಪಡೆಯಲಿಕ್ಕೆ ಹೋದನಲ್ಲವೇ! ಯಾವ ಸೇವಕನು ಒಡೆಯನು ಹೇಳಿದ ಕೆಲಸ ಮಾಡದೆ ತನ್ನ ಯೋಗ್ಯತೆಗೆ ಮೀರಿದ ಕೆಲಸವನ್ನು ಮಾಡ ಹೋಗಿ ಒಡೆಯನಿಗೆ ಅಪರಾಧಿಯಾಗುವನೋ ಅವನು ದಂಡನೆಗೆ ಯೋಗ್ಯನೇ ಸರಿ! ಸ್ಥೂಣಾಕರ್ಣನು ಇಂಥ ಅಪರಾಧಿಗಳಲ್ಲಿ ಬರುವನು. ಮನುಷ್ಯರಿಗೆ ವರವನ್ನು ಕೊಡಲಿಕ್ಕೆ ನಾನಿಲ್ಲಿ ಆತನನ್ನು ನೇಮಿಸಿರುವದಿಲ್ಲಷ್ಟೇ; ಹೀಗಿದ್ದು ಇವನು ಇಲ್ಲಿ ಇಂಥ ಅಧಿಕಪ್ರಸಂಗತನ ಮಾಡಿ ಸ್ತ್ರೀಯಾಗಿ ಕುಳಿತಿರುವನಲ್ಲ! ನಾನು ಪ್ರತ್ಯಕ್ಷ ಇಲ್ಲಿಗೆ ಬಂದರೂ ನನ್ನ ಸೇವೆಗೆ ಬರಲಿಕ್ಕೆ ತಪ್ಪಲು ಈ ಅಧಿಕಪ್ರಸಂಗತನವೇ ಕಾರಣವಾಯಿತಲ್ಲವೇ! ಎಂಬ ವಿಚಾರಗಳು ಕುಬೇರನಲ್ಲಿ ಸುಳಿದಾಡಿದವು. ಕೂಡಲೆ ಅವನು ಸ್ತ್ರೀಯಾಗಿದ್ದ ಸ್ಥೂಣಾಕರ್ಣನನ್ನು ಹಿಡತರಲು ಸೇವಕರಿಗೆ ಆಜ್ಞಾಪಿಸಿದನು.

ಒಡೆಯನ ಅಪ್ಪಣೆಯಾದ ಬಳಿಕ ಕೇಳುವದೇನು! ಸೇವಕರು ಧಾವಿಸಿ ಹೋಗಿ ಸ್ಥೂಣಾಕರ್ಣನಿಗೆ ಧನಪತಿಯ ಅಪ್ಪಣೆಯನ್ನು ಉಸುರಿದರು. ಸ್ಥೂಣಾಕರ್ಣನು ಗಡಗಡನೆ ನಡುಗುತ್ತ ನಿರ್ವಾಹವಿಲ್ಲದೆ ತಲೆ ತಗ್ಗಿಸಿಕೊಂಡು ಕುಬೇರನ ಬಳಿಗೆ ಹೋಗಿ ನಿಂತುಕೊಂಡನು. ಸ್ಥೂಣಾಕರ್ಣನು ಸುಂದರ ಸ್ತ್ರೀಯಾಗಿರುವದನ್ನು ನೋಡಿ ಕುಬೇರನಿಗೆ ಅಂಥ ಸಿಟ್ಟಿನಲ್ಲಿಯೂ ನಗೆಬಂದಿತು. ಆಗ ಅವನು ಸ್ಥೂಣಾಕರ್ಣನನ್ನು ಕುರಿತು—"ಇದೇನು ಉಸಾಬರಿಯನ್ನು ಮಾಡಿದೆ? ಎಲ್ಲೀ ದ್ರುಪದರಾಜನ ಮಗಳು, ಎಲ್ಲಿಯ ಸ್ಥೂಣಾಕರ್ಣ; ನಿನಗೂ ಅವಳಿಗೂ ಸಂಬಂಧವೇನು? ಮೇಲಾಗಿ ಮನುಷ್ಯರಿಗೆ ವರವನ್ನು ಕೊಡುತ್ತ ಕೂಡ್ರುವದು ನಿನ್ನ ಕೆಲಸವೇ? ನೀನೇನು ದೇವಾಧಿದೇವನೇ? ಮೂರ್ಖಾ, ಇಲ್ಲದ ಉಸಾಬರಿಯನ್ನು ಮಾಡಿ ಸುಮ್ಮನೆ ಪೇಚಿಗೆ ಬಿದ್ದೆಯಲ್ಲ ಎಂದು ಗದ್ದರಿಸಿ ಆದದ್ದಾದರೂ ಏನು ಹೇಳೆಂದು" ನುಡಿದನು. ಆಗ ಸ್ಥೂಣಾಕರ್ಣನು ನಾಚುತ್ತ ನಡೆದ ಸಂಗತಿಯನ್ನೆಲ್ಲ ಹೇಳಿ ದ್ರುಪದನ ಮಗಳಾದ ಶಿಖಂಡಿಯು ಹದಿನೈದು ದಿನಗಳ ಮಟ್ಟಿಗೆ ಪುರುಷರೂಪವನ್ನು ಪ್ರಾರ್ಥಿಸಿದ್ದರಿಂದ ಕೊಟ್ಟಿರುವೆನು. ಅವಧಿಯು ತುಂಬುತ್ತ ಬಂದಿದೆ ಎಂದು ಹೇಳಿದನು. ಸ್ಥೂಣಾಕರ್ಣನು ಹೇಳಿದ ಸಂಗತಿಯನ್ನು ಕೇಳಿ ಕುಬೇರನು ಕ್ಷಣಹೊತ್ತು ಆಲೋಚಿಸಿ ಒಮ್ಮೆಲೆ ನುಡಿದನೇನಂದರೆ—"ಸ್ಥೂಣಾಕರ್ಣಾ, ನಿನ್ನ ಈ ಅಧಿಕಪ್ರಸಂಗತನಕ್ಕೆ ನಿನಗೆ ಶಿಕ್ಷೆ ಮಾಡಬೇಕಾಗಿದೆ. ಇಗೋ ನಿನಗೆ ಶಿಕ್ಷೆಯನ್ನು ವಿಧಿಸುತ್ತೇನೆ. ನೀನು ಕಡೆತನಕ ಸ್ತ್ರೀಯಾಗಿರುವಿ, ಶಿಖಂಡಿಯು ಈ ಜನ್ಮದಲ್ಲಿ ಕಡೆತನಕ ಪುರುಷನಾಗಿರುವನು. ನಿನ್ನ ಕರಾರಿನಂತೆ ಶಿಖಂಡಿಯ ಸ್ತ್ರೀರೂಪವನ್ನು ಶಿಖಂಡಿಗೆ ಕೊಟ್ಟು ನಿನ್ನ ಪುರುಷರೂಪವನ್ನು ನಿನಗೆ ತಕ್ಕೊಳ್ಳಲಿಕ್ಕೆ ಬರಲಾರದು."

ಈ ಮೇರೆಗೆ ಕುಬೇರನು ಶಾಪವನ್ನುಚ್ಚರಿಸಲು ಸ್ಥೂಣಾಕರ್ಣ ನಿಗೆ ವಜ್ರಪ್ರಹಾರವಾದಂತಾಯಿತು; ಅವನ ಸರ್ವಸ್ವವೂ ಘಾತವಾಗಿ ಹೋಯಿತು. ಆಗ ಅವನ ಮನಸ್ಸಿನಲ್ಲಿ ಅನೇಕ ಬಗೆಯ ವಿಚಾರಗಳು ಬರಹತ್ತಿದವು. ತಾನು ಮಾಡಿದ್ದು ಯೋಗ್ಯವೋ ಅಯೋಗ್ಯವೋ ಎಂಬ ಕಲ್ಪನೆಗಳು ಅವನಲ್ಲಿ ತಾಕಲಾಡಿದವು. ತಾನು ಮಾಡಿದ್ದು ಒಮ್ಮೊಮ್ಮೆ ಯೋಗ್ಯವೆಂದು ಅವನಿಗೆ ತೋರುತ್ತಿತ್ತು. ಒಮ್ಮೊಮ್ಮೆ ಅಯೋಗ್ಯವೆಂದು ತೋರುತ್ತಿತ್ತು. ಹೀಗೆ ಉಂಟಾದ ವಿಚಾರತರಂಗ ಗಳಿಂದ ಅವನಲ್ಲಿ ಸೇವಕವೃತ್ತಿಯ ಬಗ್ಗೆ ಬಹಳ ತಿರಸ್ಕಾರವುಂಟಾ ಯಿತು. ಜನ್ಮಜನ್ಮಾಂತರಗಳಲ್ಲಿಯೂ ಒಬ್ಬರ ಆಳಾಗಬಾರದೆಂದು ಅವನು ಅಂದುಕೊಂಡನು. ಸೇವಕನಾದವನಲ್ಲಿ ಆತ್ಮಸ್ವಾತಂತ್ರ್ಯತೆ ಉಳಿಯು ವದಿಲ್ಲ. ಯಜಮಾನನಿಗೆ ದೇಹವನ್ನು ಮಾರಿಕೊಂಡಂತಾಗಿರುತ್ತದೆ, ಎಂಬ ವಿಚಾರಗಳು ಅವನಿಗೆ ಹೊಳೆಯಲು ಅವನು ಭಯದಿಂದ ನಡು ಗಿದನು. ಯಾವ ಕೆಲಸವನ್ನು ತಾನು ಆಚರಿಸಿದನೋ ಆ ಕೆಲಸವು ಉಚ್ಚತರದ ಪರೋಪಕಾರ ಧರ್ಮದಲ್ಲಿ ಒರುತ್ತಿದ್ದು, ಅಂಥ ಪರೋಪ ಕಾರ ಕಾರ್ಯದ ಬಗ್ಗೆ ನನಗೆ ಇಂಥ ಶಿಕ್ಷೆಯೇ! ಹಾಯ್ ಹಾಯ್! ನಾನು ಸೇವಕನಾಗಿರದೆ ಸ್ವತಂತ್ರ ಮನುಷ್ಯನಾಗಿದ್ದರೆ, ಈ ದುರ ವಸ್ಥೆ ನನಗೆ ಒದಗುತ್ತಿರಲಿಲ್ಲವಲ್ಲವೇ? ಸೇವಕನಾದವನಿಗೆ ಪರೋಪ ಕಾರಕಾರ್ಯಗಳನ್ನು ಮಾಡಲಿಕ್ಕೂ ಪ್ರತಿಬಂಧವಿದೆಯಲ್ಲವೇ? ಇಂಥ ಸೇವಾವೃತ್ತಿಯ ಮೋರೆಗೆ ಬೆಂಕಿಹಚ್ಚಲಿ, ಎಂದು ಅಂದುಕೊಂಡನು. ಏನೆಂದರೂ ಮಿಂಚಿಹೋದ ಕಾರ್ಯವು ತಿರುಗಿ ಬರುವಂತೆ ಇಲ್ಲದ್ದ ರಿಂದ ಆ ಸ್ಥೂಣಾಕರ್ಣನು ದಾಸ್ಯವೃತ್ತಿಗೆ ನಿರಂತರ ಶರಣು ಹೊಡೆದು ಸ್ತ್ರೀರೂಪದಿಂದಲೇ ಕಾಲ ಕಳೆಯುವ ಸಂಕಲ್ಪವನ್ನು ಮಾಡಿದನು.

---

[೮]

• • •

ಶ್ರೀಖಂಡಿಯು, ಮೂವನು ಬಂದು ಹೋದಬಳಿಕ ಇನ್ನು ತನ್ನ ಪುಂಸ್ತ್ವವನ್ನು ತಿರುಗಿ ಕೊಡುವ ಕಾಲವು ಸಮೀಪಿಸಿತೆಂದು ಮನಸ್ಸಿನಲ್ಲಿ ಯೋಚಿಸತೊಡಗಿದನು. ಕೈಗಡದ ದ್ರವ್ಯದಮೇಲೆಯಾವನು ಶ್ರೀಮಂತಿಕೆಯ ಡೌಲು ಬಡಿಯುವನೋ ಅವನಿಗೆ ಮುಂದೆ ಆ ಕೈಗಡದ ಹಣ ಮಂದಿಗೆ ತಿರುಗಿ ಕೊಡುವಾಗ ಹ್ಯಾಗೆ ವ್ಯಸನವಾಗುವದೋ ಹಾಗೆ ಶಿಖಂಡಿಗೆ ಪುಂಸ್ತ್ವವನ್ನು ತಿರುಗಿ ಒಪ್ಪಿಸಬೇಕಾದರೆ ವ್ಯಸನವಾಯಿತು. ಪುಂಸ್ತ್ವವು ಹೋದಬಳಿಕ ಮುಂದೆ ಹ್ಯಾಗೆ ಮಾಡಬೇಕು ಎಂಬ ವಿಚಾರಗಳು ಅವನಲ್ಲಿ ಬಂದವು. ಕರಾರಿನಂತೆ ಅವನು ಸ್ಥೂಣಾಕರ್ಣನಿಗೆ ಪುಂಸ್ತ್ವವನ್ನು ಒಪ್ಪಿಸಲೇ ಬೇಕಾದ್ದರಿಂದ ಒಂದು ದಿನ ಅವನು ಮನೆಯಿಂದ ಹೊರಬಿದ್ದನು. ಹೋಗುವಾಗ ಅವನಲ್ಲಿ ಹೆಂಡತಿಗೆ ಭೆಟ್ಟಿಯಾಗಬೇಕೆಂಬ ವಿಚಾರವು ಹುಟ್ಟಿತು. ಆದರೆ ಹಾಗೆ ಮಾಡಿದರೆ ಮೋಹಕ್ಕೆ ಬಿದ್ದು, ಪುಂಸ್ತ್ವವನ್ನು ತಿರುಗಿ ಕೊಡದಂಥ ದುರ್ಬುದ್ಧಿ ಹುಟ್ಟಬಹುದೆಂದು ಅವನು ನೆನಿಸಿದನು. ಯಾಕೆಂದರೆ ವಿಷಯಸಂಗವು ದುಸ್ತರವು; ಅದು ಯಾವ ಹೊತ್ತಿಗೆ ಎಂಥ ಮನುಷ್ಯನನ್ನು ಅಪ್ರಾಮಾಣಿಕತನಕ್ಕೆ ಗುರಿಮಾಡುವದೆಂಬ ನಿಯಮವಿಲ್ಲ. ಕೊಟ್ಟವರ ಗಂಟು ಕೊಟ್ಟವರಿಗೆ ತಿರುಗಿ ಕೊಟ್ಟರೆ ತಮಗೇನು ಉಳಿಯುವದೆಂದು ತಿಳಿಯುವವರು ಇಂಥ ಅಪ್ರಾಮಾಣಿಕರೆಂದು ಹೇಳಬಹುದು. ಇಂಥ ಅಪ್ರಾಮಾಣಿಕರಲ್ಲಿ ಸೇರಿ ತಮ್ಮ ವಂಶಕ್ಕೆ ಕಲಂಕ ಹಚ್ಚುವ ಪ್ರಸಂಗ ಬಂದೀತೆಂದು ಶಿಖಂಡಿಯು ತಿಳಿದನು. ಆದ್ದರಿಂದ ಅವನು ಯಾರಿಗೂ ಹೇಳದೆ ಹೊರಬಿದ್ದು, ನೆಟ್ಟಗೆ ಕುಬೇರನ ಉದ್ಯಾನಕ್ಕೆ ಹೋದನು. ಅಲ್ಲಿ ಸ್ಥೂಣಾಕರ್ಣ

ನಿಗೆ ಭೆಟ್ಟಿಯಾಗಿ ಪುಂಸ್ತ್ವವನ್ನು ತಿರುಗಿ ತಕೊಂಡು ನನ್ನ ಸ್ತ್ರೀತ್ವವನ್ನು ನನಗೆ ಕೊಡಿರೆಂದು ಬೇಡಿಕೊಂಡನು. ಶಿಖಂಡಿಯು ಪ್ರಾಮಾಣಿಕತನಕ್ಕೆ ಸ್ಥೂಣಾಕರ್ಣನಿಗೆ ತುಂಬಾ ಸಂತೋಷವಾಯಿತು. ಆಗ ಅವನು—ಶಿಖಂಡೀ, ನಿನ್ನ ಅದೃಷ್ಟವು ಜನ್ನಾಗಿದ್ದಂತೆ ತೋರುತ್ತದೆ. ಯಾಕಂದರೆ ನಿನಗೆ ಕೊಟ್ಟ ಪುರುಷರೂಪವು ನಿನಗೇ ಕಡೆತನಕದಕ್ಕಿತು. ನೀನು ನನ್ನಿಂದ ಪುರುಷರೂಪವನ್ನು ಹೊಂದಿಹೋದ ಮೂರುನಾಲ್ಕು ದಿನಗಳಲ್ಲಿಯೇ ನಮ್ಮ ಒಡೆಯನಾದ ಕುಬೇರನು ಬಂದನು. ಅವನಿಗೆ ನಾನು ನಿನಗೆ ಪುರುಷತ್ವವನ್ನು ಕೊಟ್ಟದ್ದು ಸರಿಬರಲಿಲ್ಲ. ನನ್ನ ಮೇಲೆ ಸಿಟ್ಟಾಗಿ ನಾನು ಕೊನೆಯ ವರೆಗೆ ಸ್ತ್ರೀಯಾಗಿರುವಂತೆಯೂ ನೀನು ಪುರುಷನಾಗಿಯೇ ಜೀವಿಸುವಂತೆಯೂ ನನಗೆ ಶಾಪವನ್ನು ಕೊಟ್ಟನು. ಶಿಖಂಡೀ ನಿನಗೆ ಉಪಕಾರ ಮಾಡಹೋದರೆ ನನಗೇ ಅಪಾಯವು ಸಂಭವಿಸಿ ಉಪಾಯವಿಲ್ಲ. ಆಗಲಿ! ನನಗೆ ದುಃಖವಾದರೂ ನಿನಗಾದರೂ ಅಖಂಡ ಕಲ್ಯಾಣವಾಯಿತೆಂದು ನಾನು ಸಂತೋಷಪಡುತ್ತೇನೆ. ನಾನಾಗಿಯೇ ನಿನಗೆ ನಿರಂತರ ಪುರುಷತ್ವವನ್ನು ಕೊಡಲು ಒಪ್ಪಿರಲಿಲ್ಲ; ಈಗ ಒತ್ತಾಯದಿಂದಾದರೂ ನಿನಗೆ ನಿರಂತರ ಪುರುಷತ್ವವು ಸಿಕ್ಕದ್ದಕ್ಕೆ ನಾನು ಸಮಾಧಾನಪಡುತ್ತೇನೆ. ಲೋಕದಲ್ಲಿ ತಮಗೆ ದುಃಖವಾದರೂ ಮಂದಿಗೆ ಕ್ಷೇಮವಾಗಲೆಂದು ಯಾರು ಇಚ್ಛಿಸುವರೋ ಅವರೇ ಉತ್ತಮರೆನಿಸುವರೆಂದು ಕೇಳಿದ್ದೇನೆ. ಮತ್ತು ಇದೇ ಪರೋಪಕಾರದ ಶ್ರೇಷ್ಠ ಧರ್ಮವಂತೆ! ಆದ್ದರಿಂದ ಇಂಥ ಶ್ರೇಷ್ಠಧರ್ಮವಾದರೂ ನನ್ನಿಂದ ಘಟಿಸಿತೆಂದು ನನಗೆ ಸಮಾಧಾನವಾಗಿದೆ. ಎಂದು ನುಡಿದನು.

ಶಿಖಂಡಿಯು ಸ್ಥೂಣಾಕರ್ಣನ ಈ ಬಗೆಯ ಮಾತುಗಳನ್ನು ಕೇಳಿ ಕ್ಷಣಹೊತ್ತು ಸ್ತಂಭಿತನಾದನು. ತನ್ನ ನಿಮಿತ್ತವಾಗಿ ತನಗೆ ಉಪಕಾರ ಮಾಡಿದ ಪುರುಷನ ಮೇಲೆ ಎಂಥ ವಿಪತ್ತು ಪ್ರಾಪ್ತವಾಯಿ

ತಲ್ಲ! ಎಂಬ ಯೋಚನೆಯು ಅವನನ್ನು ದುಃಖಕ್ಕೀಡುಮಾಡಿತು. ಪ್ರಾಮಾಣಿಕರೂ ಸಾತ್ವಿಕಹೃದಯದವರೂ ಆದ ಜನರ ಮನಸ್ಸು ಕೋಮಲವಿರುತ್ತದೆ. ತನ್ನ ಸಲುವಾಗಿ ಪರರಿಗೆ ದುಃಖವಾದರೆ ಅದನ್ನು ಅದು ಸಹಿಸುವದಿಲ್ಲ. ಅವರಂತೆ ಶಿಖಂಡಿಯ ಸ್ಥಿತಿಯೂ ಆಯಿತು; ತಾನು ಪರರಿಗೆ ದುಃಖ ಕೊಡುವದಕ್ಕಾಗಿಯೇ ಹುಟ್ಟಿದಂತಾಯಿತಲ್ಲವೆಂದು ಅವನು ಮರಮರನೆ ಮರುಗಿದನು. ಶಿಖಂಡಿಯ ಬದಲು ಇನ್ನೊಬ್ಬ ಕಠಿಣಚಿತ್ತನಾಗಿದ್ದರೆ ಆದದ್ದು ಒಳಿತಾಯಿತು-ನನಗೊಂದು ನಿರಂತರ ಸೌಖ್ಯವು ಸಿಕ್ಕಿತೆಂದು ಹಿರಿಹಿರಿ ಹಿಗ್ಗುತ್ತಿದ್ದನು. ಆದರೆ ಇಂಥ ದುರ್ಜನಕೋಟಿಯಲ್ಲಿ ಶಿಖಂಡಿಯು ಪರಿಗಣಿಸಲ್ಪಡುತ್ತಿರಲಿಲ್ಲ. ಅಂತೇ ಅವನು ತನಗೆ ನಿರಂತರ ಪುಂಸ್ತ್ವದ ಲಾಭವಾದದ್ದಕ್ಕೆ ಸಂತಸಪಡದೆ ಅಪಾರದುಃಖಕ್ಕೀಡಾದನು.

ಸ್ಥೂಣಾಕರ್ಣನು ಶಿಖಂಡಿಯ ಮನಸ್ಸಿಗಾದ ತಾಪವನ್ನು ತಿಳಿದನು ಆಗ ಅವನು ಶಿಖಂಡಿಯನ್ನು ಕುರಿತು ನುಡಿದನೇನಂದರೆ— "ರಾಜಪುತ್ರಾ, ಈ ಬಗ್ಗೆ ನೀನಿಷ್ಟೊಂದು ವ್ಯಸನಕ್ಕೆ ಗುರಿಯಾಗಬೇಡ; ಈಗಾದ ಕೆಲಸದ ಬಗ್ಗೆ ಏನೋ ಈಶ್ವರನ ಸತ್ಯಸಂಕಲ್ಪವಿದ್ದಂತೆ ತೋರುತ್ತದೆ. ನಾನು ಗಂಡಸಾಗಿ ಹುಟ್ಟಿದ್ದರೂ ಹೆಂಗಸಾಗಿ ಜೀವಿಸಬೇಕೆಂದೂ ನೀನು ಹೆಂಗಸಾಗಿ ಹುಟ್ಟಿದ್ದರೂ ಗಂಡಸಾಗಿ ಜೀವಿಸಬೇಕೆಂದೂ ಈಶ್ವರನ ಸಂಕಲ್ಪವಿರಬಹುದಾಗಿದೆ. ಹಾಗೆ ಈಶಸಂಕಲ್ಪವಿರದಿದ್ದರೆ ನೀನು ಹೀಗೆ ವಿಪತ್ತಿಗೆ ಒಳಗಾಗಿ ಇಲ್ಲಿಗೆ ಬರುವದೂ ನಾನು ನಿನಗೆ ಹೀಗೆ ವರಕೊಡುವದೂ ಶಕ್ಯವಿರಲಿಲ್ಲ. ಆದ್ದರಿಂದ ಈಶಸಂಕಲ್ಪದ ವಿಷಯವಾಗಿ ವ್ಯಸನಪಡುವದು ಈಶ್ವರದ್ರೋಹವಾಗಿ ಪರಿಣಮಿಸುತ್ತದೆ. ಸಮಾಧಾನ ಹೊಂದಿ ಊರಿಗೆ ಹೋಗಿ ಸುಖದಿಂದ ಸಂಸಾರವನ್ನು ಮಾಡು."

ಈ ರೀತಿಯಾಗಿ ಸ್ಥೂಣಾಕರ್ಣನು ಈಶಸಂಕಲ್ಪದ ವಿಷಯವನ್ನು ನುಡಿಯಲು ಶಿಖಂಡಿಗೆ ತನ್ನ ತಂದೆಯು ಹೇಳಿದ ತನ್ನ ಜನ್ಮ ಕಥೆಯು ನೆನಪಾಯಿತು. ಆಗ ಅವನು ಸಮಾಧಾನ ಹೊಂದಿ ಯಕ್ಷನೇ ನೀನಾಡಿದ ಮಾತು ಅಕ್ಷರಶಃ ನಿಜವಿರುತ್ತದೆ. ನಾನು ಹೆಂಗಸಾಗಿದ್ದರೂ ಗಂಡಸಾಗಬೇಕೆಂದು ಈಶಪ್ರಸಾದವಿತ್ತೆಂದು ನನ್ನ ತಂದೆಯು ಹೇಳಿದನು. ಆದ್ದರಿಂದಲೇ ಅವನು, ನಾನು ಸ್ತ್ರೀಯಾಗಿದ್ದರೂ ಪುರುಷವೇಷವನ್ನು ಅಳವಡಿಸಿದ್ದನು. ಎಂದು ನುಡಿದನು ಶಿಖಂಡಿಯ ಮಾತುಗಳನ್ನು ಕೇಳಿ ಸ್ಥೂಣಾಕರ್ಣನಲ್ಲಿ ಆತನ ಜನ್ಮಕಥೆಯನ್ನು ಕೇಳುವ ಕುತೂಹಲವುಂಟಾಯಿತು. ಆದ್ದರಿಂದ ಅವನು ಶಿಖಂಡಿಯನ್ನು ಕುರಿತು—ರಾಜಪುತ್ರನೇ, ನಿನ್ನ ಜನ್ಮಚರಿತ್ರವು ವಿಚಿತ್ರವಾಗಿ ತೋರುತ್ತದೆ. ಆದ್ದರಿಂದ ಅದನ್ನು ನನಗೆ ಹೇಳುವೆಯಾ? ಎಂದನು.

ರಾಜಪುತ್ರನು ಸ್ವಲ್ಪ ಆಲೋಚಿಸಿ ಹೇಳಲಿಕ್ಕೇನೂ ಅಡ್ಡಿಯಿಲ್ಲ. ನಿನ್ನಂಥ ದೊಡ್ಡ ಮನುಷ್ಯನು-ನನ್ನ ಕಲ್ಯಾಣ ಮಾಡಿದವನು ಕೇಳುತ್ತಿರಲು ಅದು ಎಷ್ಟು ಗುಟ್ಟಾಗಿದ್ದರೂ ಹೇಳಲೇಬೇಕು. ನೀನೇನು ಮನುಷ್ಯನಲ್ಲ, ಮನುಷ್ಯರ ಕೂಡ ಚಳಿಕೆ ಮಾಡತಕ್ಕವನಲ್ಲ. ಆದ್ದರಿಂದ ಗುಪ್ತವಾಗಿರಬಹುದಾಗಿದ್ದ ನನ್ನ ಜನ್ಮಚರಿತ್ರವನ್ನು ನಿನಗೋಸ್ಕರ ಹೇಳುತ್ತೇನೆ ಕೇಳು. ನಾನು ಹೇಳುವ ಈ ಸಂಗತಿಯನ್ನು ಈಶ್ವರನು ನನ್ನ ತಂದೆಗೆ ಹೇಳಿದ್ದನಂತೆ! ಒಂದು ದಿನ ಪ್ರಸಂಗ ಬಂದಾಗ ನಮ್ಮ ತಂದೆಯಾದ ದ್ರುಪದನು ನನಗೆ ಹೇಳಿದನು. ಇಂದು ಆ ಮಾತು ನಿಜವಾಗಿರುವದರಿಂದ ನಿನ್ನ ಮುಂದೆ ಆ ಕಥಾನಕವನ್ನು ವಿಸ್ತರಿಸುತ್ತೇನೆ.

''ಯಕ್ಷನೇ: ನನ್ನ ಪೂರ್ವಜನ್ಮದ ಕಥೆಯು ದೊಡ್ಡದಿರುವದು. ನಾನು ಎರಡು ಜನ್ಮಗಳ ಹಿಂದೆ ಕಾಶೀರಾಜನ ಮಗಳಾಗಿದ್ದೆನಂತೆ! ಆಗ ನನಗೆ ಅಂಬಾ ಎಂದು ಕರೆಯುತ್ತಿದ್ದರಂತೆ; ಆದರೆ

ಹಾನಿನ್ನೂ ಲಗ್ನಮಾಡಿಕೊಳ್ಳದಿರುವಾಗ ಗಂಗಾಪುತ್ರನಾದ ಭೀಷ್ಮನು ನನ್ನ ಸ್ವಯಂವರ ಕಾಲದಲ್ಲಿ ರಥಾರೂಢನಾಗಿ ಬಂದು ನನ್ನನ್ನೂ ನನ್ನ ತಂಗಿಯರಿಬ್ಬರನ್ನೂ ಹರಣ ಮಾಡಿಕೊಂಡು ಹೋದನು. ನಾನು ಈ ಮೊದಲೇ ಒಬ್ಬ ರಾಜಪುತ್ರನನ್ನು ಮನಸಾ ವರಿಸಿದ್ದೆನು. ಆದ್ದರಿಂದ ಅನ್ಯರನ್ನು ವರಿಸುವ ಇಚ್ಛೆ ನನಗಿರಲಿಲ್ಲ; ಭೀಷ್ಮನು ನನ್ನನ್ನು ಹರಣ ಮಾಡಿ ಬಹಳ ಅನ್ಯಾಯ ಮಾಡಿದನು. ಅವನಿಗೆ ನಾನು ನನ್ನ ಮನಸ್ಸಿನ ಸಂಕಲ್ಪವನ್ನು ತಿಳಿಸಲು ನನ್ನನ್ನು ಬಿಟ್ಟುಬಿಟ್ಟನು; ಆದರೆ ನನ್ನನ್ನು ಪರಪುರುಷನು ಹರಣಮಾಡಿರುವನೆಂಬ ಕಾರಣದಿಂದ ನಾನು ಮನಸಾ ವರಿಸಿದ ರಾಜಪುತ್ರನು ನನ್ನನ್ನು ಲಗ್ನವಾಗಲಿಲ್ಲ. ಭೀಷ್ಮನೂ ತಾನು ಆಮರಣ ಬ್ರಹ್ಮಚಾರಿಯೆಂಬ ನಿಮಿತ್ತದಿಂದ ನನ್ನ ಲಗ್ನವಾಗಲಿಲ್ಲ. ಹೀಗಾಗಿ ನಾನು ಬ್ರಹ್ಮಚಾರಿಣಿಯಾಗಿ ಉಳಿದೆನು. ಈ ಕಾರಣದಿಂದ ಭೀಷ್ಮನ ಮೇಲೆ ನನಗೆ ಮಹಾ ಕ್ರೋಧವುಂಟಾಯಿತು. ಅವನಿಗೆ ತಕ್ಕ ಶಾಸನ ಮಾಡಿಸಬೇಕೆಂದು ಬಗೆದೆನು. ನನ್ನ ಅಜ್ಜನ ಸಹಾಯದಿಂದ ಪರಶುರಾಮದೇವರು ನನ್ನ ಪಕ್ಷವನ್ನು ಕಟ್ಟಿ ಬಡಿದಾಡಿದರು. ಆದರೆ ಅದರಲ್ಲಿ ಅವರಿಗೆ ಯಶಸ್ಸು ಸಿಗಲಿಲ್ಲ. ಕೊನೆಗೆ ನಾನು ಭಗ್ನಮನೋರಥಳಾಗಿ ತಪಸ್ಸಿಗೆ ಹೋದೆನು. ತಪಸ್ಸಿನಿಂದ ಈಶ್ವರನನ್ನು ಪ್ರಸನ್ನೀಕರಿಸಿಕೊಂಡು ಭೀಷ್ಮನ ಪಾರುಪತ್ಯ ಮಾಡಬೇಕೆಂದು ಹವಣಿಸಿದೆನು. ಆದರೆ ಮಹಾ ಪರಾಕ್ರಮಿಯೂ ಪುಣ್ಯಶೀಲನೂ ಆದ ಭೀಷ್ಮನ ಸೊಕ್ಕು ಮುರಿಯುವ ಯೋಗ್ಯತೆಯು ನನಗೆ ಬರಲಿಲ್ಲ. ಯಾಕ್ಷನೇ ಲೋಕದಲ್ಲಿ ಪುಣ್ಯಶಾಲಿಗಳಾದವರ ಯೋಗ್ಯತೆಯು ಬಲು ದೊಡ್ಡದಿರುತ್ತದೆ. ಅವರನ್ನು ಎದುರಿಸುವ ಸಾಮರ್ಥ್ಯವು ಪ್ರತ್ಯಕ್ಷ ದೇವರಿಗೇ ಇಲ್ಲೆಂದ ಬಳಿಕ ಮನುಷ್ಯರ ಪಾಡೇನು? ದೇವರು ಕೂಡಾ ಪುಣ್ಯಶೀಲರ ಸತ್ವಕ್ಕೆ ಮಾನ ಕೊಡುತ್ತಿರುವನು. ಹೀಗಿದ್ದರೂ ಭೀಷ್ಮನ ವಿಷಯವಾಗಿ ಒಮ್ಮೆ ನನ್ನ ಮನಸ್ಸು ಕಲುಷಿತವಾದದ್ದು,

ಕಲುಷಿತವಾಗಿಯೇ ಹೋಯಿತು; ಭೀಷ್ಮನ ಪಾರುಪತ್ಯ ಮಾಡುವ ನನ್ನ ಹವ್ಯಾಸವು ಕೊನೆಗೂ ನಾಶವಾಗದಾಯಿತು.

ಹೀಗಿರುತ್ತಿರಲು ಅಂಬಾನಾಮಕ ನನ್ನ ಶರೀರವು ಜೀರ್ಣವಾಗಿ ನಾಶಹೊಂದಿತು. ನನ್ನ ಜೀವಾತ್ಮವು ಮರಣಸಮಯದಲ್ಲಿ ಭೀಷ್ಮನ ನಾಶವನ್ನೇ ಚಿಂತಿಸುತ್ತಿತ್ತು. ಎರಡನೇ ಜನ್ಮದಲ್ಲಿ ನಾನು ಅರ್ಧದೇಹದಿಂದ ಸ್ತ್ರೀಯಾದೆನು, ಅರ್ಧದೇಹದಿಂದ ನದಿಯಾದೆನು ಆ ಜನ್ಮದಲ್ಲಿಯೂ ನನಗೆ ಭೀಷ್ಮನ ಮೇಲಿನ ಕೋಪವನ್ನು ಅವರಿಸಿಕೊಳ್ಳಲಿಕ್ಕಾಗಲಿಲ್ಲ. ಈ ಎರಡು ಜನ್ಮಗಳಲ್ಲಿ ಭೀಷ್ಮನ ವಿನಾಶಕ್ಕೋಸ್ಕರ ನಾನು ಕೇಸ್ಸನ್ನೆಸಗಿದ್ದರಿಂದ ಈಶ್ವರನು ನನ್ನ ವಿಷಯವಾಗಿ ಪ್ರಸನ್ನಚಿತ್ತನಾದನು. ಹಟಮಾರಿಯಾದ ನನಗೆ ವರವನ್ನು ಕೊಡುವದೇ ಕಷ್ಟವಾಯಿತು. ಯಾಕೆಂದರೆ ಅತ್ತ ಭೀಷ್ಮನು ಇಚ್ಛಾ ಮರಣಿಯು; ಅವನು ಅನ್ಯರಿಂದ ಸಾಯತಕ್ಕವನಲ್ಲ. ನಾನಾದರೋ ಅವನನ್ನು ಕೊಂದೇ ತೀರುವೆನೆಂಬ ಹಟಮಾರಿಯು; ಇಂಥದರಲ್ಲಿ ಈಶ್ವರನಿಗಾದನೂ ಆಲೋಚನೆ ಬೀಳುವದು ಸಹಜವೇ ಸರಿ! ಅಖಂಡವಾಗಿ ಎರಡು ಜನ್ಮಗಳಲ್ಲಿ ತಪಸ್ಸು ಮಾಡಿದ ನನ್ನ ತಪಸ್ಸಿಗೂ ಅವನು ಪ್ರಸನ್ನನಾಗಿ ಬೇಡಿದ್ದನ್ನು ಕೊಡಬೇಕಾಯಿತು. ಇಲ್ಲದಿದ್ದರೆ ಪೃಥ್ವಿಯಲ್ಲಿ ದೇವರಿಲ್ಲೆಂಬ ಅಪಕೀರ್ತಿಯು ಸರ್ವತ್ರದಲ್ಲಿಯೂ ಹಬ್ಬುವದು. ಎರಡು ಜನ್ಮಗಳಲ್ಲಿ ತಪಶ್ಚರ್ಯ ಮಾಡಿದ ಬಾಲೆಗೆ ಈಶಪ್ರಸಾದವು ಸಿಗಲಿಲ್ಲವೆಂದರೆ ಲೋಕದಲ್ಲಿ ಅಪಹಾಸ್ಯವಾಗುವದೆಂಬ ಅಂಜಿಕೆ; ಇತ್ತ ಮಹಾಪುರುಷರನ್ನು ರಕ್ಷಿಸುವ ಯೋಚನೆಯೊಂದು ಈ ಇಕ್ಕಟ್ಟಿನಲ್ಲಿ ಸಿಕ್ಕು ಈಶ್ವರನು ಯಾವದೋ ಒಂದು ಯುಕ್ತಿಯನ್ನು ಹುಡುಕಿ ತೆಗೆದು ನನಗೆ ವರವನ್ನು ಕೊಟ್ಟನು. ಮುಂದಿನ ಜನ್ಮದಲ್ಲಿ ನಿನ್ನಿಂದ ಭೀಷ್ಮನು ನಾಶಹೊಂದುವನೆಂದು ಅಭಯವನ್ನಿತ್ತನು.''

ಯಕ್ಷನೇ ಮುಂದಿನ ಕಥೆಯನ್ನು ಹೇಳುತ್ತೇನೆ ಕೇಳು. ಪಾಂಚಾಲದೇಶಾಧಿಪತಿಯಾದ ದ್ರುಪದರಾಜನ ಹೊಟ್ಟೆಯಲ್ಲಿ ನನ್ನ ಮೂರನೇ ಜನ್ಮವಾಯಿತು. ನನ್ನ ತಂದೆಯು ಬಹಳ ದಿವಸ ಮಕ್ಕಳಾಗದ್ದರಿಂದ ಉಮಾಕಾಂತನನ್ನು ಆರಾಧಿಸಿ ನನ್ನನ್ನು ಪಡೆದ ನಂತೆ! ಪರಮ ತಂತ್ರಗಾರನಾದ ಆ ಮಹೇಶನು ನನ್ನ ತಂದೆಗೆ ಮೊದಲು ಹೆಣ್ಣು ಹುಟ್ಟುವದು ಒಳಿಕ ಅದು ಗಂಡಾಗುವದು ಎಂದು ಹೇಳಿದ್ದನಂತೆ! ಆದ್ದರಿಂದಲೇ ನನ್ನ ತಂದೆಯು ನನಗೆ ಹುಟ್ಟುತ್ತಲೇ ಪುರುಷವೇಷವೇಷ ಹಾಕಿ ಈ ರೀತಿ ಗೊಂದಲ ಮಾಡಿದ್ದನು. ಅದು ಈಶಪ್ರಸಾದದಂತೆ ಇಂದಿಗೆ ಸಿದ್ಧಿಗೆ ಹೋಯಿತು. ಈ ಕಥೆಯನ್ನು ನನ್ನ ತಂದೆಯು ಈ ಮೊದಲೇ ನನಗೆ ಹೇಳಿರಲಿಲ್ಲ; ನಾನು ನಿಮ್ಮಿಂದ ಪುರುಷತ್ವವನ್ನು ಪಡೆದು ಹೋದ ಒಳಿಕ ಈ ಇತಿಹಾಸವನ್ನು ಹೇಳಿದನು. ಯಕ್ಷ ಮಹಾಶಯನೇ, ಈ ರೀತಿ ನನ್ನನ್ನು ಮೊದಲು ಹೆಂಗಸಾಗಿ ಹುಟ್ಟಿಸಿ ತಿರುಗಿ ಇಷ್ಟೆಲ್ಲ ಅನರ್ಥವಾದ ಒಳಿಕ ನನ್ನನ್ನು ಗಂಡಸನ್ನಾಗ ಮಾಡುವದರಲ್ಲಿ ಈಶ್ವರನ ತಂತ್ರದ ರಹಸ್ಯವೇನಿರುವದೆಂಬುದರ ವಿಷಯವಾಗಿ ಹೇಳುತ್ತೇನೆ ಕೇಳು. ಇದನ್ನಾದರೂ ಆ ಪರಮ ಕಾರುಣಿಕನಾದ ಉಮಾರಮಣನೇ ನನ್ನ ತಂದೆಯ ಮುಂದೆ ಹೇಳಿರುವನಂತೆ.''

"ಭೀಷ್ಮನು ಇಚ್ಛಾಮರಣಿಯಷ್ಟೇ; ಆದ್ದರಿಂದ ಅವನು ಅನ್ಯರ ಶಸ್ತ್ರಗಳಿಂದ ಸಾಯುವದಿಲ್ಲ. ನಾನು ಆತನಿಗೆ ಜನ್ಮಾಂತರ ಶತ್ರುವು; ನನ್ನದು ಇದು ಮೂರನೇ ಜನ್ಮವಾದರೂ ಆ ಭೀಷ್ಮನು ಇನ್ನೂ ಅದೇ ಜನ್ಮದಲ್ಲಿರುವನು. ಅವನು ಮಹಾಜ್ಞಾನಿಯಾದ್ದರಿಂದ ಅವನಿಗೆ ಸಕಲವೂ ತಿಳಿಯುವದು. ನಾನು ರಣಾಂಗಣದಲ್ಲಿ ಅವನೆದುರಿಗೆ ನಿಂತರೆ ನನ್ನೊಡನೆ ಅವನು ಯುದ್ಧಮಾಡುವಹಾಗಿಲ್ಲವಂತೆ, ಯಾಕಂದರೆ ಪೂರ್ವಜನ್ಮದಲ್ಲಿ ಅವನಿಂದ ಹರಣಮಾಡಲ್ಪಟ್ಟ

ಬಾಲಿಕೆಯು ನಾನು; ಈ ಜನ್ಮದಲ್ಲಿಯೂ ಹುಟ್ಟುತ್ತಲೆ ಸ್ತ್ರೀಜನ್ಮಕ್ಕೆ ಬಂದು ಈಗ ಗಂಡಸಾಗಿ ಯುದ್ಧಕ್ಕೆ ನಿಂತರೆ ನನ್ನ ಪೌರುಷವನ್ನು ಅವನು ಮಾನ್ಯಮಾಡುವದಿಲ್ಲವಂತೆ. ನನ್ನನ್ನು ಸ್ತ್ರೀ ಸದೃಶನೆಂದೇ ಭಾವಿಸಿ ಆ ವೀರಶಿರೋಮಣಿಯು ಸ್ತ್ರೀಯರೊಡನೆ ಯುದ್ಧಮಾಡಬಾರದೆಂದು ಧನುಸ್ಸನ್ನು ಕೆಳಗಿಟ್ಟು ಮರಣವನ್ನು ತಂದುಕೊಳ್ಳುವನಂತೆ. ಭೀಷ್ಮನ ಮರಣಕ್ಕೆ ಇದರ ಹೊರತು ಅನ್ಯ ಉಪಾಯವೇ ಇಲ್ಲವಂತೆ!'' ಯಕ್ಷನೇ, ನೋಡಿದಿಯಾ? ಈಶ್ವರನ ತಂತ್ರವನ್ನು ! ನನ್ನ ನಿಮಿತ್ತದಿಂದ ಭೀಷ್ಮನನ್ನು ನಾಶಗೊಳಿಸಿದಂತಾಯಿತು. ಮೇಲಾಗಿ ಅವನು ಇಚ್ಛಾಮರಣಿಯೆಂಬುದನ್ನೂ ಕಾಯ್ದಂತಾಯಿತು!! ಶಿಖಂಡಿಯು ಈ ಅಪೂರ್ವ ಕಥೆಯನ್ನು ಕೇಳಿ ಸ್ಥೂಣಾಕರ್ಣನು ಬೆರಗಾಗಿ ಹೋದನು. ಅವನಿಗೆ ಶಿಖಂಡಿಯು ಅದ್ಭುತ ಚಿತ್ರ ಚರಿತ್ರವು ಕಣ್ಣಿಗೆ ಕಟ್ಟಿದಂತಾಯಿತು.

ಕಥೆಯನ್ನು ನಿವೇದಿಸಿದ ಬಳಿಕ ಶಿಖಂಡಿಯು ಸ್ಥೂಣಾಕರ್ಣನ ಉಪಕಾರವನ್ನು ಸ್ಮರಿಸಿ ಅವನ ಅಪ್ಪಣೆ ಪಡೆದು ಹೊರಟು ತನ್ನ ರಾಜಧಾನಿಗೆ ಬಂದನು. ಪುಂಸ್ತ್ವವು ಹೋದ ಬಳಿಕ ತಿರುಗಿ ರಾಜಧಾನಿಗೆ ಹ್ಯಾಗೆ ಬರಲೆಂದು ಚಿಂತಾಕ್ರಾಂತನಾಗಿ ಮನೆಯಿಂದ ಹೊರಬಿದ್ದ ಶಿಖಂಡಿಯು ಈಗ ಅತ್ಯಂತ ಉತ್ಸಾಹದಿಂದ ಅರಮನೆಯನ್ನು ಪ್ರವೇಶಿಸಿದನು. ಮತ್ತು ರಾಜಧಾನಿಯಲ್ಲಿ ಇದುವರೆಗೆ ತೋರಿಸದೆ ಇದ್ದ ದರ್ಪವನ್ನು ತೋರಿಸಹತ್ತಿದನು. ಮಂತ್ರಿಗಳೂ, ಸೇನಾಪತಿಗಳೂ ಇನ್ನುಳಿದ ಜನರೂ ಯುವರಾಜನ ದರ್ಪವನ್ನು ಕಂಡು ಎಲಾ! ಇದೇನು! ರಾಜಪುತ್ರನು ಇದ ವರೆಗೆ ಮುದಗನಂತೆ ಯಾವದೊಂದು ದಿವಾಣಖಾನೆಯನ್ನು ಹಿಡಿದ. ಸ್ವಸ್ಥವಾಗಿ ಕುಳಿತುಕೊಳ್ಳುತ್ತಿದ್ದನು. ಆದರೆ ಈಗೆರಡು ದಿನಗಳಲ್ಲಿ ಎಷ್ಟು ಕಾರಭಾರ ಮಾಡಹತ್ತಿರುವನಲ್ಲ! ಇದೇನು ವಿಚಿತ್ರವು? ಎಂದು ಮಾತನಾಡಿಕೊಳ್ಳಹತ್ತಿದರು. ಶಿಖಂಡಿಯು ನೂತನ ಪ್ರಾಯದಿಂದ ಕೊಬ್ಬಿದವನಾಗಿ ರಾಜ್ಯಕಾರಭಾರದಲ್ಲಿ ಮನಸ್ಸು ಹಾಕಿ ತಂದೆಗೆ ಸಂತೋಷವನ್ನುಂಟು ಮಾಡಿದನು.

---

[೯]

...

ದ್ರುಪದರಾಜನು ಸಿಂಹಾಸನಾಧಿಷ್ಠಿತನಾಗಿ ಕುಳಿತಿದ್ದನು. ಬಳಿಯಲ್ಲಿ ಮಂತ್ರಿಗಳು ಯಾವದೋ ಒಂದು ರಾಜಕಾರಣವನ್ನು ಯೋಚಿಸುತ್ತ ಕುಳಿತುಕೊಂಡಿದ್ದರು. ಅಷ್ಟರಲ್ಲಿ ತಂಬೂರಿಯ ಸುನಾದವು ಕೇಳಬರತೊಡಗಿತು. ಶ್ರೀ ನಾರದ ಮಹರ್ಷಿಗಳು ಬರುತ್ತಿರಬಹುದೆಂದು ಎಲ್ಲರೂ ತರ್ಕಿಸಿದರು. ಅವರ ತರ್ಕದಂತೆ ಕ್ಷಣಾರ್ಧದಲ್ಲಿ ಶ್ರೀನಾರದ ಮಹರ್ಷಿಗಳು ಅಲ್ಲಿಗೆ ದಯಮಾಡಿಸಿದರು; ಅಕಸ್ಮಾತ್ತಾಗಿ ಬಂದ ಆ ದೇವರ್ಷಿಗಳನ್ನು ಕಂಡು ದ್ರುಪದರಾಜನಿಗೆ ಪರಮಾನಂದವಾಯಿತು. ಆತನು ಅರ್ಘ್ಯಪಾದ್ಯಾದಿಗಳಿಂದ ಆ ಋಷಿಶ್ರೇಷ್ಠರನ್ನು ಸತ್ಕರಿಸಿ ಕುಶಲವಾರ್ತೆಗಳನ್ನು ವಿಚಾರಿಸಿದನು. ಬಳಿಕ ನಾರದರು ದ್ರುಪದನ ಸತ್ಕಾರಕ್ಕೆ ಸಂತೋಷಪಟ್ಟು ಆತನನ್ನು ಕುರಿತು—ದ್ರುಪದರಾಜನೇ, ನೀನು ಮಹೇಶನ ಪರಮ ಭಕ್ತನು. ಅಂತೆಯೇ ನೀನು ಎಂಥ ಅಪಮಾನದ ಪ್ರಸಂಗಬಂದರೂ ಈಶಪ್ರಸಾದದ ವಿಷಯವಾಗಿ ಅಶ್ರದ್ಧೆಯನ್ನು ತಾಳಲಿಲ್ಲ. ಆದ್ದರಿಂದಲೇ ನೀನು ಈ ಸುದಿನಗಳನ್ನು ಕಂಡಿರುತ್ತೀ; ಭಗವಂತನ ವಚನವು ಸುಳ್ಳಾಗದು; ಆದರೆ ಅದರ ಸತ್ಯತೆಯನ್ನು ಪರೀಕ್ಷಿಸಲಿಕ್ಕೆ ಮನುಷ್ಯರಲ್ಲಿ ನಿಶ್ಚಯಬೇಕು. ಎಷ್ಟೋಜನರು ಒಲೆಯ ಮೇಲಿಟ್ಟ ಪಾತ್ರೆಯೊಳಗಿನ ಅನ್ನವು ಆಯಿತೋ ಇಲ್ಲವೋ ಎಂದು ಕ್ಷಣಕ್ಷಣಕ್ಕೆ ನೋಡುತ್ತಿರುವಂತೆ ದೇವರ ಪ್ರಸಾದವು ಸಿದ್ಧಿಸಿತೋ ಇಲ್ಲವೋ ಎಂದು ಕ್ಷಣಕ್ಷಣಕ್ಕೆ ನೋಡುವರು. ತಮ್ಮ ಆತುರ ಸ್ವಭಾವದಂತೆ ದೇವರ ವಾಕ್ಯವು ಸಿದ್ಧಿಸದೆ ಹೋದರೆ ದೇವರನ್ನೇ ಶಪಿಸಹತ್ತುವರು.

ಆದರೆ ಅಂಥವರಲ್ಲಿ ನೀನು ಪರಿಗಣಿಸಲ್ಪಡತಕ್ಕವನಾಗದ್ದರಿಂದ ನಿನ್ನ ಅಭಿನಂದನಕ್ಕಾಗಿ ಇಲ್ಲಿಗೆ ಬಂದಿರುತ್ತೇನೆ. ಎಂದು ನುಡಿದು ಕೆಲ ಹೊತ್ತು ಸುಮ್ಮನೆ ಕುಳಿತರು.

ಬಳಿಕ ಆ ಮಹರ್ಷಿಗಳು ಪುನಃ ರಾಜನನ್ನು ಕುರಿತು ಮಾತನಾಡಲುಪಕ್ರಮಿಸಿ ಒಂದು ಬೋಧಪ್ರದವಾದ ಕಥೆಯನ್ನು ಹೇದರು-ಏನೆಂದರೆ—"ರಾಜ, ಈಶಪ್ರಸಾದದ ವಿಷಯವಾಗಿ ಒಂದು ಆಖ್ಯಾನವನ್ನು ಹೇಳುತ್ತೇನೆ ಕೇಳು. ಪೂರ್ವದಲ್ಲಿ ಒಬ್ಬ ರಾಜನಿದ್ದನು. ಅವನು ಈಶ್ವರಭಕ್ತನು. ಸರ್ವದಾ ಈಶ್ವರಾರಾಧನೆಯಲ್ಲಿ ಕಾಲಕಳೆಯುತ್ತಿದ್ದನು. ಅವನಿಗೆ ಬಹುದಿವಸಗಳ ವರೆಗೆ ಮಕ್ಕಳಾಗಿರಲಿಲ್ಲ; ಕುಲಗುರುಗಳ ಆಜ್ಞೆಯಂತೆ ಈಶ್ವರನನ್ನು ಕುರಿತು ತಪಶ್ಚರ್ಯವನ್ನು ಮಾಡಿದನು. ಭಕ್ತವತ್ಸಲನಾದ ಈಶ್ವರನು ಅವನಿಗೆ ಪ್ರಸನ್ನನಾಗಿ ನಿನ್ನ ಇಚ್ಛೆಯೇನಿರುವದೆಂದು ಕೇಳಿದನು. ಆಗ ಆ ರಾಜನು ಕ್ಷಾತ್ರವೀರನಾದೊಬ್ಬ ಮಗನನ್ನು ದಯಪಾಲಿಸೆಂದು ಬೇಡಿಕೊಂಡನು. ಈಶ್ವರನು ತಥಾಸ್ತು ಎಂದು ನುಡಿದು ಅಂತರ್ಧಾನನಾದನು. ಮುಂದೆ ಕೆಲಕಾಲ ಕ್ರಮಿಸುತ್ತಿರಲು ಆ ರಾಜನ ಪಟ್ಟದರಸಿಯು ಒಂದು ಗಂಡುಮಗುವನ್ನು ಹೆತ್ತಳು. ರಾಜನಿಗೆ ತುಂಬಾ ಸಂತೋಷವಾಯಿತು. ಈಶ್ವರೀಮಾಯೆಯು ಅತ್ಯದ್ಭುತವಾದದ್ದು, ಭಕ್ತರ ಪರೀಕ್ಷಾರ್ಥವಾಗಿ ಆತನು ತನ್ನ ಮಾಯೆಯಿಂದ ಬೇಕಾದ ಆಟಗಳನ್ನು ಆಡಬಲ್ಲನು. ರಾಜನಿಗೆ ಹುಟ್ಟಿದ ಶಿಶುವು ಬೆಳೆದು ದೊಡ್ಡದಾಯಿತು. ಪ್ರಬುದ್ಧವಯಸ್ಸಿಗೂ ಬಂದಿತು. ಆದರೆ ಈಶ್ವರನ ವರಪ್ರಸಾದದಂತೆ ಆ ರಾಜಪುತ್ರನು ಮಹಾಬಲಶಾಲಿಯಾಗದೆ ಅತ್ಯಂತ ಭೀರುಸ್ವಭಾವದವನಾದನು. ಕ್ಷಾತ್ರಕುಲದಲ್ಲಿ ಈಶ್ವರನ ವರದಿಂದ ಹುಟ್ಟಿದ ಆ ರಾಜಪುತ್ರನು ಹೀಗೆ ಪುಕ್ಕಸ್ವಭಾವದವನಾದರೂ ತಂದೆಗೆ ಈಶ್ವರಪ್ರಸಾದದ ವಿಷಯವಾಗಿ ಅಶ್ರದ್ಧೆ

ಯುಂಟಾಗಲಿಲ್ಲ. ತನ್ನ ಮಗನು ಮಹಾಪರಾಕ್ರಮಶಾಲಿಯಾಗುವನೆಂದೇ ತಿಳಿದಿದ್ದನು; ಹಾಗು ಮುಂದಿಯು ಮುಂದೂ ಹೇಳುತ್ತಿದ್ದನು. ಜನರು ರಾಜನ ಮಾತಿಗೆ ನಕ್ಕು ಸುಮ್ಮನಾಗುತ್ತಿದ್ದರು. ರಾಜಪುತ್ರನು ತೀರ ಅಯೋಗ್ಯನಿರುವನೆಂದು ಎಲ್ಲ ಜನರೂ ತಿಳಿದರು.

ಹೀಗಿರುತ್ತಿರಲು, ಪರರಾಜರು ಬಂದು ಮುತ್ತಿಗೆಯನ್ನಿಕ್ಕಿದರು. ವೃದ್ಧನಾದ ರಾಜನು ಶತ್ರುಗಳೊಡನೆ ಕಾದಲಾರಂಭಿಸಿದರೂ ಪ್ರಬುದ್ಧನಾದ ರಾಜಕುಮಾರನು ಬೈಲಿಗೆ ಬರಲಿಲ್ಲ. ಅಂತಃಪುರವನ್ನು ಹಿಡಿದು ಅಂಜಿಕೊಂಡು ಕುಳಿತುಬಿಟ್ಟನು. ಶತ್ರುಗಳು ಬಲಾಢ್ಯರಿದ್ದದರಿಂದಲೂ, ಮುದಿ ಅರಸನ ಸಾಮರ್ಥ್ಯವು ಶತ್ರು ಸಂಹಾರಕ್ಕೆ ಸಾಕಾಗದ್ದರಿಂದಲೂ ರಾಜಧಾನಿಯು ಶತ್ರುಗಳ ಪಾಲಾಯಿತು. ಅಮಾತ್ಯ ಸಹಿತನಾದ ಆ ರಾಜನು ಶತ್ರುಗಳ ಕೈಸೆರೆಯಾದನು. ಈ ಸಂಗತಿಯನ್ನು ಕೇಳಿ ರಾಜಪುತ್ರನು ಗಡಗಡನೆ ನಡುಗಿ ಚೋರಮಾರ್ಗದಿಂದ ಪಾರಾಗಿ ಅಡವೀಬಿದ್ದು, ಓಡಿ ಜೀವ ಬದುಕಿಸಿಕೊಂಡನು. ಇತ್ತ ಶತ್ರುಗಳು ರಾಜಧಾನಿಯಲ್ಲಿ ತಮ್ಮ ವಿಜಯ ಪತಾಕೆಯನ್ನು ನಿಲ್ಲಿಸಿ ರಾಜನನ್ನು ಸೆರೆಹಿಡಿದೊಯ್ದರು.

ದ್ರುಪದ ರಾಜನೇ, ನೋಡಿದಿಯಾ, ಆ ಈಶ್ವರಭಕ್ತ ರಾಜನ ಮೇಲೆ ಎಂಥ ಕಠಿಣ ಪ್ರಸಂಗ ಬಂದಿತೆಂಬದನ್ನು! ಶತ್ರುಗಳ ಸೆರೆಯಲ್ಲಿ ನೀಳಬೇಕಾದರೆ ಅವನಿಗೆ ಎಷ್ಟು ಸಹಸ್ರ ವೃಶ್ಚಿಕಗಳು ಕಡಿದಷ್ಟು ಕಷ್ಟವಾಗಿರಬಹುದು? ಬಹು ದಿವಸ ಈಶ್ವರನನ್ನು ಆರಾಧಿಸಿ ಬಲಶಾಲಿಯಾದ ಮಗನನ್ನು ಬೇಡಿಕೊಂಡ ಆ ರಾಜನು ಹೀಗೆ ಶತ್ರುಗಳಿಂದ ಅವಮಾನಿತನಾಗಿದ್ದರೂ, ಮಗನಿಂದ ಕಿಂಚಿತ್ತಾದರೂ ಪ್ರಯೋಜನವಾಗದೆ ಇದ್ದದ್ದಕ್ಕೆ ಅವನು ಈಶ್ವರನನ್ನು ನಿಂದಿಸಬಹುದಾಗಿತ್ತಲ್ಲವೇ? ಈಶ್ವರನ ಪ್ರಸಾದವು ವ್ಯರ್ಥವಾಯಿತೆಂದು ಅನ್ನಬಹುದಾಗಿತ್ತಲ್ಲವೇ? ಆದರೆ ಆ ದೈವಭಕ್ತ ರಾಜನು ಹಾಗೆ ತಿಳಿಯಲಿಲ್ಲ. ತಾನು ಶತ್ರು

ಗಳ ಸೆರೆಯಲ್ಲಿ ಮರಣಪ್ರಾಯವಾದ ದುಃಖವನ್ನನುಭವಿಸುತ್ತಿದ್ದರೂ. ತನ್ನ ಮಗನು-ಈಶ್ವರನ ವರಪುತ್ರನು ಮಹಾಬಲಾಢ್ಯನಿರುವನೆಂದೇ ಅನ್ನುತ್ತಿದ್ದನು.

ದೇವರಾದರೂ ಭಕ್ತರ-ನಿಶ್ಚಯವನ್ನೂ, ಭಕ್ತರನ್ನೂ ಎಷ್ಟು ದಿವಸ ಪರೀಕ್ಷಿಸುವನು? ಆ ರಾಜಪುತ್ರನಲ್ಲಿ ಅತುಲ ಪರಾಕ್ರಮವನ್ನುಂಟುಮಾಡಿದನು. ಭುಜಪರಾಕ್ರಮವು ಬೆಳೆದ ಬಳಿಕ ಆ ರಾಜಪುತ್ರನು ಗತಿಗೆಟ್ಟವನಂತೆ ಅಡವಡವಿ ತಿರುಗುವನೇ? ಕೂಡಲೆ ದಂಡು ಸಜ್ಜುಗೊಳಿಸಿಕೊಂಡು ಶತ್ರುಗಳ ರಾಜಧಾನಿಯನ್ನಾಕ್ರಮಿಸಿ, ತಂದೆಯನ್ನು ಸೆರೆ ಬಿಡಿಸಿದನು; ತನ್ನ ಭುಜಪರಾಕ್ರಮದಿಂದ ಸಮಸ್ತ ರಾಜರನ್ನೂ ಗೆದ್ದು, ಅಶ್ವಮೇಧ ಯಾಗವನ್ನು ಮಾಡಿದನು. ಆಗ ಮಂತ್ರಿಗಳಿಗೆ ಈಶ್ವರನ ಪ್ರಸಾದದ ಸತ್ಯತೆಯು ಕಂಡು ಬಂದಿತು.

ಈ ಮೇರೆಗೆ ದೇವರ್ಷಿಗಳಾದ ನಾರದರು ನುಡಿದು ದ್ರುಪದ ರಾಜನ ಅಭಿನಂದನ ಮಾಡಿ ಹೊರಟು ಹೋದರು; ನಾರದರು ಹೇಳಿದ ಆಖ್ಯಾನದಿಂದ ದ್ರುಪದನು ಸಂತುಷ್ಟನಾದನು.

* * * * * * * * * * * *

ಈಶಪ್ರಸಾದಂತೆ ಪುಂಸ್ತ್ವವನ್ನು ಪಡೆದ ಶಿಖಂಡಿಯು ತನ್ನ ತಾಯಿ ತಂದೆಗಳಿಗೆ ಆನಂದವನ್ನುಂಟುಮಾಡಿದ್ದಲ್ಲದೆ ಭಾರತೀಯ ಯುದ್ಧದಲ್ಲಿ ಭೀಷ್ಮನಿಗೆದುರಾಗಿ ನಿಂತು ಅವನ ಇಹಲೋಕದಯಾತ್ರೆಯನ್ನು ತೀರಿಸಿ ತನ್ನ ಜನ್ಮಾಂತರದ ಸೇಡನ್ನು ತೀರಿಸಿಕೊಂಡನು.



ಸಂಪೂರ್ಣ.

ಆನಂದವನ-ಅಗಡಿಯ ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಭಿ. ಪ. ಕಾಳೆ, ಇವರಿಂದ ಮುದ್ರಿಸಲ್ಪಟ್ಟಿತು.